# ಶ್ರೀ ಚಿತ್ರಾಪುರ
# ಗುರುಪರಂಪರಾ ಚರಿತ್ರೆ

[ಎರಡನೇ ಆವೃತ್ತಿ]

BOMBAY.
18 APR 1953

ಅನುವಾದಕರು:
ವಿ. ಎಮ್. ಚಂದಾವರ.

V. M. CHANDAWAR
Retired Head Clerk, Edl. Inspector, S. D.

ಮುದ್ರಕರು:
ಸಿರೂರು ಪ್ರಿಂಟಿಂಗ್ ಪ್ರೆಸ್,
ಮುಂಬಯಿ.

ಬೆಲೆ: ಗುರುಪ್ರೇಮ



ಶ್ರೀ. ಚಿತ್ರಾಪುರ ಮಠಾಧೀಶ
ಶ್ರೀಮತ್ ಆನಂದಾಶ್ರಮ ಸ್ವಾಮಿಗಳವರು

# ಪ್ರಸ್ತಾವನೆ

(ಮೊದಲನೇ ಆವೃತ್ತಿ)

ಅಧ್ಯಾತ್ಮಿಕ ವಿಚಾರದಲ್ಲಿ ಗುರುಭಕ್ತಿ, ಗುರುಸೇವೆ, ಗುರುಚರಿತ್ರ ಪಠಣ ಮೊದಲಾದ ವಿಷಯಗಳು ಮುಖ್ಯವಾಗಿ ಬರುವವು. ನನ್ನ ಸ್ವಭಾವದಂತೆ ನನ್ನ ಮನಸ್ಸು ಗುರುಭಕ್ತಿಯ ಕಡೆಗೆ ಹೊರಳಿ ನಮ್ಮ ಗುರುಗಳ ಮಹಿಮೆಯನ್ನು ಅರಿತುಕೊಳ್ಳುವ ವಿಷಯದ ಕಡೆಗೆ ನಾನು ಲಕ್ಷ್ಯಕೊಡಹತ್ತಿದೆನು. ಶ್ರೀ ಶಂಕರನಾರಾಯಣ ಕೊಪ್ಪಿಕರ ಇವರು "ಕೆನರಾ ಸಾರಸ್ವತ"ದ ಬೇರೆ ಬೇರೆ ಸಂಚಿಕೆಗಳಲ್ಲಿ ನಮ್ಮ ಹಿಂದಿನ ಗುರುಗಳ ವಿಷಯ ನಡೆದ ವೃತ್ತಾಂತಗಳ ಕುರಿತು ಲೇಖನಗಳನ್ನು ಕೊಟ್ಟಿರುವರು. ಅವುಗಳನ್ನು ಒಟ್ಟುಕೂಡಿಸಿ ಶ್ರೀ. ಎಚ್. ಶಂಕರರಾಯರು ತಮ್ಮ "ಮಿಸ್ಸಲೆನಿ" ಪುಸ್ತಕದಲ್ಲಿ ಪ್ರಕಟಿಸಿರುವರು. ಅವೆಲ್ಲ ಇಂಗ್ಲಿಷ್ ಭಾಷೆಯಲ್ಲಿ ಬರೆಯಲ್ಪಟ್ಟಿವೆ. ಅವನ್ನು ಓದುತ್ತ ಹೋದಂತೆ ಈ ವಿಷಯದ ಜ್ಞಾನವು ನಮ್ಮ ಮನೆಯ ಹೆಂಗಸರಿಗೂ ಹುಡುಗರಿಗೂ ಆಗಬೇಕೆಂದು ನನಗೆ ಅನಿಸಹತ್ತಿ ಅವುಗಳನ್ನು ಕನ್ನಡದಿಂದ ಭಾಷಾಂತರ ಮಾಡಲು ಪ್ರಾರಂಭಿಸಿದೆನು. ಭಾಷಾಂತರ ಮಾಡುತ್ತ ಹೋದಂತೆ ನನ್ನ ಮನಸ್ಸಿನಲ್ಲಿ ಮತ್ತೊಂದು ವಿಚಾರವು ಹೊಳೆಯಿತು. ಏನೆಂದರೆ:— ಇಂಥ ಪುಸ್ತಕಗಳು ಬಹಳ ಜನರ ಹತ್ತಿರಯಿಲ್ಲ. ಅಲ್ಲದೆ ಇಂಗ್ಲಿಷ್ ಜ್ಞಾನವು ಕೂಡ ಬಹಳ ಜನರಿಗೆ ಇಲ್ಲ. ಆದುದರಿಂದ ಎಲ್ಲರಿಗೂ ತಿಳಿಯುವ ಭಾಷೆಯಲ್ಲಿ ಈ ಗುರುಮಹಾತ್ಮೆಯನ್ನು ಚರಿತ್ರೆ ರೂಪದಲ್ಲಿ ಬರೆದು ಅಚ್ಚು ಹಾಕಿಸಿ ಪ್ರತಿಯೊಂದು ಮನೆಗೆ ಒಂದೊಂದು ಪ್ರತಿಯನ್ನು ಪುಕ್ಕಟೆಯಾಗಿ ಹಂಚಿದರೆ, ಅದು ಸಕಲರಿಗೂ ಓದಲು ಅನುಕೂಲವಾಗುವದು ಹಾಗೂ ಸಮಾಜದಲ್ಲಿ ಅದರಿಂದ ಗುರುಮಹತ್ವವನ್ನು ತಿಳಿಯಲು ಅನುಕೂಲವಾದೀತೆಂದು ಭಾವಿಸಿ ಈ ಕಾರ್ಯಕ್ಕೆ ಕೈಹಾಕಿದೆನು. ನನ್ನ ಇಚ್ಛೆಯಂತೆ ಸಮಾಜದಲ್ಲಿ ಗುರುಮಹತ್ವದ ಅರಿವು ಇದರಿಂದ ಚೆನ್ನಾಗಿ ಆದಲ್ಲಿ ನನ್ನ ಅಲ್ಪ ಸಾಹಸವು ಸಫಲವಾದಂತಾಗುವದು. ಹೀಗೆ ಆಗಬೇಕೆಂದು ಆ ಗುರುದೇವರಲ್ಲಿ ನಾನು ಪ್ರಾರ್ಥಿಸುವೆನು.

ಇನ್ನು ಈ ಚಿಕ್ಕ ಗ್ರಂಥದಲ್ಲಿ ಅನೇಕ ತಪ್ಪುಗಳು ಆಗಿರಬಹುದು. ಅವುಗಳನ್ನೆಲ್ಲ ವಾಚಕ ಮಹಾಶಯರು ಸಹಾನುಭೂತಿಪೂರ್ವಕವಾಗಿ ತಿಳಿಸಿದಲ್ಲಿ ಅವುಗಳನ್ನು ಮುಂದಿನ ಆವೃತ್ತಿಯಲ್ಲಿ ಸರಿಪಡಿಸುವೆನು.

ಈ ಪುಸ್ತಕಕ್ಕೆ ಸಾಧನಗಳನ್ನು ಪೂರೈಸಿದ ಶ್ರೀ. ಎಸ್. ಎನ್. ಕೊಪ್ಪಿಕರ ಇವರಿಗೂ ಶ್ರೀ. ಎಚ್. ಶಂಕರರಾಯರಿಗೂ ಈ ಪುಸ್ತಕದ ಹಸ್ತ ಲೇಖನವನ್ನು ತಿದ್ದಿ ಸರಿಪಡಿಸಿದ ಶ್ರೀ. ಕೆ. ಸಂಜೀವ ಭಟ್ ಎಮ್. ಎ. ಎಲ್. ಟಿ. ಇವರಿಗೂ ಛಾಪಿಸುವ ವಿಷಯ ಸಹಾಯ ಮಾಡಿದ ಶ್ರೀ. ಶಿರಾಲಿ ಮಂಗೇಶರಾಯರಿಗೂ, ಶ್ರೀ ಚಿತ್ರಾಪುರ ಮಠಾಧೀಶ ಶ್ರೀಮದಾನಂದಾಶ್ರಮ ಸ್ವಾಮಿಗಳವರ ಪಡಿಯಚ್ಚನ್ನು ಕೊಟ್ಟ ಪಡುಬಿದ್ರೆ ವಿಠಲರಾಯರಿಗೂ ನಾನು ತುಂಬಾ ಋಣಿಯಾಗಿರುವೆನು.

ರಾಣೆಬೆನ್ನೂರ,
26-3-'1942.

V. M. Chandawar.

## (ಎರಡನೇ ಆವೃತ್ತಿ)

ಈ ಪುಸ್ತಿಕೆಯ ಎರಡನೆಯ ಆವೃತ್ತಿಯ ೧೦೦೦ ಪುಸ್ತಕಗಳನ್ನು ಉದಾರಾರ್ಥವಾಗಿ ಸಿರೂರು ಪ್ರಿಂಟಿಂಗ ಪ್ರೆಸ್ಸಿನ ವ್ಯಾಲಕರಾದ ಶ್ರೀ. ಎಮ್. ಆರ್. ಸಿರೂರು ಅವರು ಛಾಪಿಸಿ ಕೊಟ್ಟರು. ಇದಕ್ಕೆ ತಗಲಿದ ಕಾಗದದ ಎಲ್ಲಾ ಖರ್ಚನ್ನು ಪೊಪ್ಯುಲರ್ ಬುಕ್ ಡಿಪೋ, ಲೆಮಿಂಗ್ಟನ್ ರೋಡ್, ಮುಂಬಯಿ ೭, ಇದರ ವ್ಯಾಲಕರಾದ ಶ್ರೀ. ಜಿ. ಆರ್. ಭಟಕಳ ಅವರು ತಮ್ಮ ಉದಾರ ಹಸ್ತದಿಂದ ಕೊಟ್ಟಿರುವರು.

ದಸರಾ, 1952.

# ಚಿತ್ರಾಪುರ ಮಠದ

# ಗುರುಪರಂಪರಾಚರಿತ್ರೆ

## ಅಧ್ಯಾಯ ೧

## ಆದ್ಯಗುರು — ಶ್ರೀ ಪರಿಜ್ಞಾನಾಶ್ರಮರು

ಚಿತ್ರಾಪುರ ಸಾರಸ್ವತರಾದ ನಮ್ಮ ಮೂಲಸ್ಥಾನವು ಕಾಶ್ಮೀರ ದೇಶ ಾಗಿರುತ್ತದೆ. ನಾವು ಆಶ್ವಲಾಯನ ಸೂತ್ರದ ಋಗ್ವೇದಿ ಸ್ಮಾರ್ತ ್ರಾಹ್ಮಣರು. ಕೆಲಕಾಲದ ನಂತರ ನಮ್ಮ ಜನರು ದಕ್ಷಿಣಕ್ಕೆ ಬಂದು ಂಜಾಬ್ ಪ್ರಾಂತವನ್ನು ಸೇರಿ ಸರಸ್ವತೀ ನದಿಯ ತೀರದಲ್ಲಿ ವಾಸಿಸಿದರು. ಂದೆ ಎಷ್ಟೋ ದಿವಸಗಳ ತರುವಾಯ ಪರಶುರಾಮನು ಕ್ಷತ್ರಿಯರನ್ನು ಾಶಮಾಡಿ ಅವರ ಭೂಮಿಯನ್ನು ಬ್ರಾಹ್ಮಣರಿಗೆ ದಾನಮಾಡಿದನು; ುತ್ತು ತಾನು ದಾನಮಾಡಿದ ಆ ಪ್ರದೇಶದಲ್ಲಿ ಉಳಿಯತಕ್ಕದ್ದಲ್ಲವೆಂದು ೋಚಿಸಿ ಅವನು ಸಹ್ಯಾದ್ರಿ ಪರ್ವತದ ಕಡೆಗೆ ಪ್ರಯಾಣ ಮಾಡಿ, ಮುದ್ರರಾಜನ ಕಡೆಯಿಂದ ವಿಸ್ತಾರವಾದ ಭೂಮಿಯನ್ನು ತಕ್ಕೊಂಡನು. ಭೂಮಿಗೆ ಕೊಂಕಣಪಟ್ಟಿಯೆಂತಲೂ ಪರಶುರಾಮನ ಸೃಷ್ಟಿ ಎಂತಲೂ ನ್ನುತ್ತಿರುವರು. ಇಲ್ಲಿ ಅವನು ಒಂದು ದೊಡ್ಡ ಯಜ್ಞವನ್ನು ಮಾಡ ೇಕೆಂದು ನಿಶ್ಚಯಿಸಿದನು; ಆದರೆ ಅದಕ್ಕೆ ಅಗತ್ಯವಾಗಿ ಬೇಕಾದ ಬ್ರಾಹ್ಮಣರ ೊರತೆಯನ್ನು ಕಂಡುಕೊಂಡು ಅವನು ಸರಸ್ವತೀ ತೀರದಲ್ಲಿ ಇರುವ ಮ್ಮಲ್ಲಿಯ ಬೇರೆ ಬೇರೆ ಗೋತ್ರಗಳ ಕೆಲವು ಬ್ರಾಹ್ಮಣರನ್ನು ಅವರ ಇಷ್ಟ ೇವತೆಗಳ ಸಹಿತ ಕರೆಸಿ ಯಜ್ಞವನ್ನು ಸಾಂಗಗೊಳಿಸಿದನು. ಯಜ್ಞದ ೆಲಸ ಮುಗಿದ ನಂತರ ಈ ಗೌಡ ಬ್ರಾಹ್ಮಣರು ಗೋಮಾಂತಕ (ಗೋವಾ) ಲ್ಲೇ ವಾಸಮಾಡಿಕೊಂಡಿರುತ್ತಿದ್ದರು.

ಆ ಮೇಲೆ ಬಹಳ ಕಾಲವಾದ ನಂತರ ಸರಸ್ವತೀ ತೀರದಲ್ಲಿ ವಾಸ ಾಡಿದವರಲ್ಲಿ ವಚ್ಛಗೋತ್ರದ ದೇವಶರ್ಮಾ, ಕೌಂಡಣ್ಯಗೋತ್ರದ ವಶರ್ಮಾ, ಮತ್ತು ಕೌಂಶಿಕ ಗೋತ್ರದ ಲೋಮಶರ್ಮಾ ಎಂಬವರು ಾಮೇಶ್ವರ ಯಾತ್ರೆಗೆ ಹೋಗಿ ಅಲ್ಲಿಂದ ತಿರಿಗಿ ಬರುವಾಗ ತಮ್ಮ ಂಶಜರು ವಾಸಮಾಡಿದ ಗೋವಾ ಪ್ರಾಂತವನ್ನು ನೋಡಿಹೋಗ

ಬೇಕೆಂದು ಗೋವೆಗೆ ಬಂದರು. ಇಲ್ಲಿ ಕೆಲವು ದಿವಸ ಉಳಿದ ನಂತರ ಈ ಪ್ರಾಂತವು ಯೋಗ್ಯವೆಂತ ಕಂಡುಬಂದುದರಿಂದ ತಾವಾದರೂ ಇಲ್ಲಿಯೇ ನಮ್ಮ ಪೂರ್ವಜರ ಸಂಗಡ ವಾಸಿಸಬೇಕೆಂದು ನಿಶ್ಚಯಿಸಿ, ತಮ್ಮ ಹೆಂಡರು ಮಕ್ಕಳನ್ನು ಕರೆಸಿಕೊಂಡು ಇಲ್ಲಿಯೇ ಸ್ಥಿರವಾಗಿ ಉಳಿದುಕೊಂಡರು. ಇವರೇ ನಮ್ಮ ಮೂಲ ಪುರುಷರು. ಮುಂದೆ ಗೋವೆಯಲ್ಲಿ ಪೋರ್ತುಗೀಸ್ ಅಧಿಕಾರಿಗಳು ಬ್ರಾಹ್ಮಣರನ್ನು ತಮ್ಮ ಕ್ರಿಶ್ಚನ್ ಮತಕ್ಕೆ ಬಲಾತ್ಕಾರದಿಂದ ಸೇರಿಸಲಿಕ್ಕೆ ಪ್ರಾರಂಭಮಾಡಿದ್ದರಿಂದ ನಮ್ಮ ಜನರು ಅದನ್ನು ತಪ್ಪಿಸಿಕೊಂಡು ತಮ್ಮ ಧರ್ಮವನ್ನು ರಕ್ಷಿಸಿಕೊಳ್ಳುವ ಸಲುವಾಗಿ ಗೋವಾ ಪ್ರಾಂತದ ಹೊರಗಿರುವ ಉತ್ತರ ಕಾನಡಾ, ದಕ್ಷಿಣ ಕಾನಡಾ ಜಿಲ್ಲೆಗಳಲ್ಲಿ ಹೋಗಿ ಉಳಕೊಂಡರು.

ಆಗ್ಯೆ ಕಾನಡಾ ಜಿಲ್ಲೆಗೆ ಅಧಿಪತಿಯಾದ ನಗರ ರಾಜನ ದರಬಾರ ದಲ್ಲಿ ನಮ್ಮ ಜನರು ದೊಡ್ಡ ದೊಡ್ಡ ಅಧಿಕಾರ ಪಡಕೊಂಡು ಇದ್ದರು. ನಮ್ಮ ಜನರು ಬ್ರಾಹ್ಮಣರಲ್ಲ, ನಮಗೆ ಗುರುಗಳು ಇಲ್ಲ, ಎಂದು ನಮ್ಮ ಮೇಲೆ ಅನೇಕ ರೀತಿಯಿಂದ ದೋಷ ಹೊರಿಸಿ ಸಂಸ್ಥಾನದ ಅಧಿಪತಿಯಾದ ಬಸಪ್ಪ ನ್ಯಾಕನ ಹತ್ತಿರ ಇತರರು ದೂರು ಹೇಳಿಕೊಂಡರು. ಅದನ್ನು ಕೇಳಿ ಬಸಪ್ಪ ನ್ಯಾಕನು ನಮ್ಮ ಜನರನ್ನು ಕರೆಸಿಕೊಂಡು ನಮಗೆ ಗುರುಗಳು ಇದ್ದಾರೋ, ಎಲ್ಲಿ ಇದ್ದಾರೆ, ಎಂದು ಕೇಳಿದನು. ಅದಕ್ಕೆ ನಮ್ಮ ಜನರು, ಗುರುಗಳು ಉತ್ತರ ಹಿಂದೂಸ್ಥಾನದಲ್ಲಿರುತ್ತಾರೆ ಎಂದು ಹೇಳಿ, ಗೋಕರ್ಣದಲ್ಲಿರುವ ನಮ್ಮ ಹಿರಿಯರೆದುರಿಗೆ ನಡೆದ ಸಂಗತಿಯನ್ನೆಲ್ಲ ಬರೆದು ತಿಳಿಸಿದರು. ಆ ವೇಳೆಯಲ್ಲಿ ಗೋಕರ್ಣ ಹಾಗೂ ಬಂಕಿಕೋಡ್ಲದಲ್ಲಿ ನಮ್ಮ ಜನರ ವಾಸ್ತವ್ಯ ಬಹಳ ಇತ್ತು. ಗೋಕರ್ಣದಲ್ಲಿಯೂ ನಮ್ಮ ಪ್ರಮುಖರಾದವರು ಬಹಳ ಜನರಿದ್ದರು. ಅದೇ ನಮ್ಮ ಜನರ ಮುಖ್ಯ ವಾಸಸ್ಥಳವಾಗಿತ್ತು. ಅಲ್ಲಿಯ ಮುಖ್ಯಸ್ಥರು ನಗರ ಸಂಸ್ಥಾನದ ತಮ್ಮ ಜನರು ಬರೆದ ವಿಷಯದಲ್ಲಿ ಮುಂದೆ ಏನು ಮಾಡಬೇಕೆಂಬ ವಿಚಾರದಲ್ಲಿದ್ದರು. ಕಟ್ಟಕಡೆಗೆ ಅವರಿಗೆ ಬೇರೇನೂ ಉಪಾಯ ಕಾಣದೆ ತಮ್ಮನ್ನು ಈ ಸಂಕಷ್ಟದಿಂದ ದೇವರೇ ಕಾಪಾಡಬೇಕು ಎಂದು ಮನಗಂಡರು. ಮತ್ತು ಅವರು ಗೋಕರ್ಣ, ಬಂಕಿಕೋಡ್ಲದ ನಮ್ಮ ಜನರನ್ನೆಲ್ಲ ಕರೆಸಿ ಗೋಕರ್ಣ ಮಹಾಬಲೇಶ್ವರ ದೇವರಲ್ಲಿ ಹೋಗಿ ದೇವರ ಹತ್ತಿರ

ಪ್ರಾರ್ಥನೆಮಾಡಿಕೊಳ್ಳಬೇಕೆಂತ ನಿಶ್ಚಯಿಸಿ ಎಲ್ಲ ಜನರು ಮಹಾಬಲೇಶ್ವರ ದೇವಸ್ಥಾನಕ್ಕೆ ಹೋಗಿ ದೇವರ ಪೂಜೆ ಮೊದಲಾದದ್ದನ್ನು ವಿಧಿ ಪೂರ್ವಕವಾಗಿ ಮಾಡಿದರು. ಹಾಗೂ ಎಲ್ಲರೂ ಏಕಾಗ್ರ ಮನಸ್ಸಿನಿಂದ ದೇವರ ಧ್ಯಾನ ಮಾಡುತ್ತ ಉಪವಾಸವಿದ್ದು ಇಡೀ ದಿವಸ ದೇವರ ಸನ್ನಿಧಿಯಲ್ಲಿಯೇ ಉಳಕೊಂಡರು. ದೇವರು ತಮಗೆ ಗುರುಗಳನ್ನು ಕಾಣಿಸಿ ಕೊಟ್ಟ ಹೊರತು ತಾವು ಮನೆಗೆ ತಿರುಗಿ ಹೋಗಲಿಕ್ಕಿಲ್ಲ ಎಂಬ ದೃಢ ನಿಶ್ಚಯಮಾಡಿಕೊಂಡು ರಾತ್ರಿ ಸಹ ಅಲ್ಲಿಯೇ ಈಶ್ವರ ಧ್ಯಾನ ಮಾಡುತ್ತ ಕುಳಿತುಬಿಟ್ಟರು. ಮಹಾಬಲೇಶ್ವರ ದೇವರಿಗೆ ಕಾಳಜಿ ಬಿತ್ತು. ಭಕ್ತ ಜನರ ನಿಶ್ಚಲವಾದ ಭಕ್ತಿ ವಿಶ್ವಾಸ ನೋಡಿ ಅವರಿಗೆ ಬಂದ ಕಷ್ಟದಿಂದ ಅವರನ್ನು ಕಾಪಾಡಬೇಕಾಗಿ ದೇವರು ಯೋಚಿಸಿ ಆ ಜನರಲ್ಲಿ ಪ್ರಮುಖರಾದ ಒಬ್ಬ ಹಿರೇ ಮನುಷ್ಯನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು "ನೀವು ಕಾಳಜಿ ಮಾಡಬೇಡಿರಿ, ನಾಳೆ ಸಂಜೆಯೊಳಗೆ ಉತ್ತರ ಹಿಂದೂಸ್ಥಾನದಿಂದ ಒಬ್ಬ ಸನ್ಯಾಸಿಯು ಕೋಟಿತೀರ್ಥಕ್ಕೆ ಬರುವನು. ಅವನೇ ನಿಮ್ಮ ಗುರು ಆಗುವನು. ಅವನಿಗೆ ನೀವು ಶರಣುಹೋಗಿರಿ" ಹೀಗೆ ಹೇಳಿ ದೇವರು ಅದೃಶ್ಯರಾದರು. ಆ ಹಿರಿಯ ಮನುಷ್ಯನು ಸ್ವಪ್ನದಿಂದ ಕೂಡಲೇ ಎಚ್ಚತ್ತು ತನ್ನ ಸಮೀಪದಲ್ಲಿ ಧ್ಯಾನ ಪರವಶರಾಗಿ ಕೂತಿದ್ದ ಹಾಗೂ ಚಿಂತೆಯಿಂದ ಮಲಗಿದ್ದ ಎಲ್ಲ ಜನರನ್ನು ಜಾಗತಿಸಿ ತನಗೆ ಸ್ವಪ್ನವಾಗಿದ್ದ ಸಂಗತಿಯನ್ನು ವಿವರವಾಗಿ ತಿಳಿಸಿದನು. ಇದನ್ನು ಕೇಳಿ ಎಲ್ಲ ಜನರಿಗೆ ಸಂತೋಷವಾಯಿತು. ಎಲ್ಲರೂ ತಮ್ಮ ತಮ್ಮ ಮನೆಗೆ ತಿರುಗಿ ಹೋದರು.

ಮರುದಿವಸ ಬೆಳಿಗ್ಯೆ ಎಲ್ಲ ಜನರು ಕೋಟಿ ತೀರ್ಥಕ್ಕೆ ಬಂದು ಊಟಕ್ಕೆ ಸಹ ಮನೆಗೆ ಹೋಗದೆ ಸಂಜೆ ವರೆಗೆ ಅಲ್ಲಿಯೇ ಕೂತುಕೊಂಡರು. ಸಂಜೆ ಸುಮಾರು ಐದು ಘಂಟೆಗೆ ಗಂಗಾವಳಿ ಕಡೆಯಿಂದ ಒಬ್ಬ ಸನ್ಯಾಸಿಯು ಕೋಟಿ ತೀರ್ಥಕ್ಕೆ ಈ ಜನರು ಕೂಡಿದ ಸ್ಥಳಕ್ಕೆ ಬಂದನು. ಆ ಸನ್ಯಾಸಿಯನ್ನು ನೋಡಿದ ಕೂಡಲೇ ಎಲ್ಲ ಜನರು ಅವರಿಗೆ ಶರಣುಹೋದರು ಮತ್ತು ತಮಗೆ ನೀವು ಗುರುಗಳಾಗಿ ತಮ್ಮನ್ನು ಉದ್ಧಾರಮಾಡಬೇಕೆಂದು ಅವರ ಕಾಲುಹಿಡಿದು ಪ್ರಾರ್ಥನೆಮಾಡಿಕೊಂಡರು. ಆದಕ್ಕೆ ಆ ಸನ್ಯಾಸಿಯು ಜನರನ್ನು ಕುರಿತು

"ತನಗಾದರೂ ಭವಾನೀಶಂಕರದೇವರು ಸ್ವಪ್ನದಲ್ಲಿ ಪ್ರಸನ್ನರಾಗಿ ನಿಮ್ಮನ್ನು ಕಷ್ಟದಿಂದ ಮುಕ್ತಮಾಡಬೇಕಾಗಿ ಆಜ್ಞಾಪಿಸಿದ್ದಾರೆ. ನಿಮ್ಮ ಇಚ್ಛೆಯಂತೆ ಆಗಲಿ" ಎಂದು ಹೇಳಿದನು. ಈ ಸನ್ಯಾಸಿಯಾದರೂ ಪೂರ್ವಾಶ್ರಮದಲ್ಲಿ ಕಾಶ್ಮೀರದ ಗೌಡಸಾರಸ್ವತ ಬ್ರಾಹ್ಮಣರ ವಂಶದಲ್ಲಿಯೇ ಹುಟ್ಟಿದವನಂತೆ. ಕೂಡಲೇ ನಮ್ಮ ಜನರು ಅವರನ್ನು ಭಂಡಿಕೇರಿ ಉಮಾಮಹೇಶ್ವರ ಮಠಕ್ಕೆ ಕರೆದುಕೊಂಡು ಹೋಗಿ ಅವರನ್ನು ಗುರುಗಳನ್ನಾಗಿ ಮಾಡಿಕೊಂಡರು. ಇವರೇ ನಮ್ಮ ಗುರುಪರಂಪರೆಯಲ್ಲಿ ಮೊದಲನೆಯವರು; **ಪರಿಜ್ಞಾನಾಶ್ರಮ** ಎಂಬ ಹೆಸರಿನಿಂದ ಪ್ರಖ್ಯಾತರಾದರು. ಈ ಸಂಗತಿ ನಡೆದದ್ದು ೧೭೦೮ನೇ ಇಸ್ವಿಯಲ್ಲಿ ಅಂದರೆ ಸರ್ವಧಾರಿ ಸಂವತ್ಸರದ ಮಾಘಮಾಸದಲ್ಲಿ ಆಗಿರುತ್ತದೆ.

ಈ ಸಂಗತಿಯನ್ನು ಗೋಕರ್ಣದ ಹತ್ತಾ ಜನರು ನಗರ ಸಂಸ್ಥಾನದಲ್ಲಿರುವ ನಮ್ಮ ಜನರಿಗೆ ಬರೆದು ತಿಳಿಸಿದರು. ಅವರು ಅದನ್ನು ನಗರ ಸಂಸ್ಥಾನದ ಅಧಿಪತಿಗೆ ತಿಳಿಸಿದರು. ಆ ಅಧಿಪತಿಯು ಆ ಗುರುಗಳನ್ನು ಕರೆಸಿ ತಮ್ಮ ಭೇಟಿಮಾಡಿಸಬೇಕೆಂದು ಹೇಳಿದನು. ಆ ಪ್ರಕಾರ ನಮ್ಮ ಜನರು ಗುರುಗಳನ್ನು ಪ್ರಾರ್ಥಿಸಿ ನಗರ ಸಂಸ್ಥಾನಕ್ಕೆ ಕರೆತರಿಸಿ ಸಂಸ್ಥಾನದ ಅಧಿಪತಿಯ ಭೇಟಿ ಮಾಡಿಸಿದರು. ಆಗ ಆ ಅಧಿಪತಿಯು ನಮ್ಮ ಗುರುಗಳಿಗೆ, ಶೃಂಗೇರಿ ಜಗದ್ಗುರುಗಳ ಕಡೆಯಿಂದ ಸಾರಸ್ವತರ ಗುರು ಹೌದುಯೆಂಬ ಬಗ್ಗೆ ಸಮ್ಮತಿ ಪತ್ರವನ್ನು ತರಹೇಳಿದನು. ಈ ಮಾತಿಗೆ ನಮ್ಮ ಗುರುಗಳು ನಿರಭಿಮಾನಿಗಳೂ, ಜ್ಞಾನಿಗಳೂ ಇದ್ದುದರಿಂದ ಶೃಂಗೇರಿಗೆ ಹೋಗಲಿಕ್ಕೆ ಒಡಂಬಟ್ಟು ಹೊರಟರು. ಅವರು ಅಲ್ಲಿ ಹೋದ ಮೇಲೆ ಅವರಿಗೆ ಮಾನಮರ್ಯಾದೆ ಯಾವ ರೀತಿ ಆಗಬೇಕಿತ್ತೋ ಆ ರೀತಿ ಆಗಲಿಲ್ಲ. ಈ ಅಪಮಾನವು ನಮ್ಮ ಗುರುಗಳಿಗೆ ಸಹನವಾಗದೆ ಶೃಂಗೇರಿ ಮಠದಲ್ಲಿ ಶ್ರೀ ಶಂಕರಾಚಾರ್ಯರು ಕಾಶ್ಮೀರದಿಂದ ತಂದು ಸ್ಥಾಪಿಸಿದ ಶಾರದಾಂಬಾ ದೇವಿಯನ್ನು ನಮ್ಮ ಗುರುಗಳು ಪ್ರಾರ್ಥಿಸಿ ಆ ದೇವಿಯ ಕಲೆಯನ್ನು ತಮ್ಮ ತಪೋಬಲದಿಂದ ತಮ್ಮ ಕಡೆಗೆ ಆಕರ್ಷಣಮಾಡಿಕೊಂಡರು. ಆಗ ಆ ಸರಸ್ವತೀ ದೇವಿಯು ಶೃಂಗೇರಿ ಜಗದ್ಗುರುಗಳನ್ನು ಸ್ವಪ್ನದಲ್ಲಿ ಕಾಣಿಸಿಕೊಂಡು—"ತನ್ನ ಪರಮ ಭಕ್ತನು ಇಲ್ಲಿ ಬಂದ ಇರುವಾಗ ನೀನು ಅವನಿಗೆ ಆತಿಥ್ಯ ಮಾಡದೆ ಅಪಮಾನಮಾಡಿದ್ದರಿಂ ಅವನ ಸಂಗಡ ತಾನು ಹೋಗುತ್ತೇನೆ" ಎಂದು ಅಂದಳಂತೆ. ಜಗದ್ಗು

ಗಳು ಮುಂಜಾನೆ ಎದ್ದಕೂಡಲೆ ತಮ್ಮ ಕೈಕೆಳಗಿನ ನೌಕರರನ್ನು ಕರೆಸಿ ಈ ಮಠವಲ್ಲಿ ಹೊಸದಾಗಿ ಬಂದವರು ಯಾರು? ಅವರ ಆದರಸತ್ಕಾರ ಯೋಗ್ಯರೀತಿಯಿಂದ ಯಾಕೆ ಆಗಲಿಲ್ಲ ಎಂದು ಕೇಳಿ ಅವರ ಮೇಲೆ ಸಿಟ್ಟಾದರು. ಹಾಗೂ ಹೊಸದಾಗಿ ಬಂದವರು ಸಾರಸ್ವತ ಗುರುಗಳೆಂದು ಕೇಳಿ ಅವರನ್ನು ಭೇಟಿಯಾದರು. ಮತ್ತು ಅವರು ಬಂದ ಕಾರಣವನ್ನು ತಿಳಿದುಕೊಂಡರು. ಅವರ ಭೇಟಿಯಲ್ಲಿ ಇವರ ವಿದ್ವತ್ತಿಕೆ, ತಪೋಬಲ, ಯೋಗಸಾಧನ ಮುಂತಾದವುಗಳನ್ನು ನೋಡಿ ಜಗದ್ಗುರುಗಳು ಬೆರಗಾಗಿ ಸರಸ್ವತೀದೇವಿಯ (ಶಾರದಾಂಬಾ) ಕಲೆಯನ್ನು ಆಕರ್ಷಣೆ ಮಾಡಿಕೊಳ್ಳು ವಷ್ಟು ಯೋಗ್ಯತೆ ಇವರಲ್ಲಿ ಇದ್ದದ್ದು ನಿಜವೆಂದು ಮನಗಂಡು ಅವರು ಅದನ್ನು ಆಕರ್ಷಣೆಮಾಡಿಕೊಂಡದ್ದರಿಂದ ತಮ್ಮ ಪವಿತ್ರ ಮಠದ ಕೀರ್ತಿಯು ನಷ್ಟವಾಗುವದು ಎಂಬುದರಿಂದ ಜಗದ್ಗುರುಗಳು ನಮ್ಮ ಗುರುಗಳಿಗೆ ತಮ್ಮ ಕೈಕೆಳಗಿನ ನೌಕರರ ಕಡೆಯಿಂದ ತಕ್ಕ ಆದರಾತಿಥ್ಯವಾಗದೆ ದುರ್ಲಕ್ಷ್ಯ ಆದ ಬಗ್ಗೆ ಅವರನ್ನು ಕ್ಷಮಿಸಬೇಕೆಂದು ಕೇಳಿಕೊಂಡರು. ಹಾಗೂ ಆ ಸರಸ್ವತೀದೇವಿಯ ಆಕರ್ಷಣೆ ಮಾಡಿಕೊಂಡಿದ್ದ ಕಲೆಯನ್ನು ತಿರುಗಿ ದೇವಿಯಲ್ಲಿಯೇ ಆವಾಹನ ಮಾಡಬೇಕಾಗಿ ನಮ್ಮ ಗುರು ಗಳನ್ನು ಕೇಳಿಕೊಂಡರು. ಅದರಂತೆ ನಮ್ಮ ಗುರುಗಳು ಮಾಡಿದರು. ತರು ವಾಯ ಜಗದ್ಗುರುಗಳು ನಮ್ಮ ಗುರುಗಳನ್ನು ಚಲೋ ರೀತಿಯಿಂದ ಸತ್ಕಾರ ಮಾಡಿ ಇವರ ಸಂಸ್ಥಾನಕ್ಕೆ ಒಪ್ಪುವಂಥ ಬಿರುದು ಬಾವಲಿ (ಅಡ್ಡ ಪಾಲಕಿಯ ಹಕ್ಕು) ಸಹ ಕೊಟ್ಟು ಕಳುಹಿಸಿದರು. ಹಾಗೂ ಇವರು ಸಾರಸ್ವತರ ಗುರುಗಳೆಂಬ ಬಗ್ಗೆ ಸಮ್ಮತಿ ಪತ್ರವನ್ನೂ ಕೊಟ್ಟರು. ಈ ಕಾರಣದಿಂದಲೇ ಶೃಂಗೇರಿಮಠದಲ್ಲಿ ಮಹಾನವಮಿ ಉತ್ಸವದಲ್ಲಿ ಮೊದಲನೇ ಮರ್ಯಾದೆಯು ಸಾರಸ್ವತರಿಗೆ ಸಲ್ಲುವ ವಾಡಿಕೆ ಈಗಲೂ ಇರುವದಾಗಿ ಕಾಣುತ್ತದೆ.

ಆ ಮೇಲೆ ಅಲ್ಲಿಂದ ನಮ್ಮ ಗುರುಗಳು ನಗರಸಂಸ್ಥಾನಕ್ಕೆ ಬಂದು ಅಲ್ಲಿಯ ಅಧಿಪತಿಗೆ ಭೇಟಿಯಾಗಿ ಜಗದ್ಗುರುಗಳ ಸಮ್ಮತಿ ಪತ್ರವನ್ನು ತೋರಿಸಿದರು. ಆ ಅಧಿಪತಿಯು ಅದನ್ನು ನೋಡಿ ಸಂತೋಷಪಟ್ಟು ಗುರುಗಳನ್ನು ಮರ್ಯಾದೆಯಿಂದ ಸತ್ಕರಿಸಿ ಬೀಳ್ಕೊಟ್ಟನು. ಅಲ್ಲಿಂದ ಗುರುಗಳು ಗೋಕರ್ಣಕ್ಕೆ ಬಂದು ತಮ್ಮ ಮಠವನ್ನು ಸೇರಿದರು. ಅವರಿಗೆ

ಮಠದಲ್ಲಿಯೇ ಸದಾ ಸರ್ವದಾ ಉಳಿಯಲಿಕ್ಕೆ ಮನಸ್ಸಿದ್ದಿಲ್ಲ. ತಾವು ಸನ್ಯಾಸಿಯಾದುದರಿಂದ ಪವಿತ್ರ ಸ್ಥಳಗಳಲ್ಲಿ ಸಂಚಾರಮಾಡುವದು ತಮ್ಮ ಕರ್ತವ್ಯವೆಂದು ಭಾವಿಸಿ ಪ್ರವಾಸಕ್ಕೆ ಉದ್ಯುಕ್ತರಾದರು. ಆದರೆ ನಮ್ಮ ಜನರು ಅವರನ್ನು ಬಹಳ ರೀತಿಯಿಂದ ಪ್ರಾರ್ಥಿಸಿ ಅವರಿಗೆ ಹೋಗಗೊಡದೆ ಅವರನ್ನು ಮಠದಲ್ಲಿಯೇ ನಿಲ್ಲಿಸಿಕೊಂಡರು. ಮತ್ತು ನಗರ ಸಂಸ್ಥಾನದಲ್ಲಿದ್ದ ನಮ್ಮ ಜನರ ಮೂಲಕ ಸಂಸ್ಥಾನದಿಂದ ಇಮಾರತಿಗೆ ಬೇಕಾಗುವ ಮರವನ್ನು ಉಚಿತವಾಗಿ ತರಿಸಿ ಗುರುಗಳ ಬಗ್ಯೆ ಒಂದು ಮಠವನ್ನು ಕಟ್ಟಿಸಿಕೊಟ್ಟರು. ಮುಂದೆ ಗುರುಪರಂಪರೆಯು ಶಾಶ್ವತವಾಗಿ ನಡೆಯುವ ಬಗ್ಗೆ ಶಿಷ್ಯನನ್ನು ಮಾಡಿಕೊಳ್ಳಬೇಕಾಗಿ ಜನರು ಗುರುಗಳನ್ನು ಪ್ರಾರ್ಥಿಸಿದರು. ಹಾಗೂ ಹರಿಟಿಕಾರ ಕುಟುಂಬದ ಕೃಷ್ಣಯ್ಯ ಶಾನುಭಾಗ ಎಂಬವರ ಮಗ ಮರ್ತು ಎಂಬ ಹುಡುಗನು ಶಿಷ್ಯಪಟ್ಟಕ್ಕೆ ಯೋಗ್ಯನೆಂದು ಜನರು ಆರಿಸಿ ಕೃಷ್ಣಯ್ಯನವರಿಗೆ ಆ ಹುಡುಗನನ್ನು ಶಿಷ್ಯಸ್ವೀಕಾರಕ್ಕೆ ಕೊಡಬೇಕಾಗಿ ಕೇಳಿಕೊಂಡರು. ಆದರೆ ಕೃಷ್ಣಯ್ಯನಿಗೆ ಅವನೊಬ್ಬನೇ ಮಗನಾದ್ದರಿಂದ ಅವರು ಅವನಿಗೆ ಕೊಡಲಿಕ್ಕೆ ಒಪ್ಪಲಿಲ್ಲ. ಈ ಸಂಗತಿಯನ್ನು ಗೋಕರ್ಣದ ಜನರು ನಗರಸಂಸ್ಥಾನದ ನಮ್ಮ ಜನರಿಗೆ ತಿಳಿಸಿದರು. ಅದಕ್ಕೆ ಕೃಷ್ಣಯ್ಯ ಶಾನುಭಾಗರು ಮಗನಿಗೆ ಶಿಷ್ಯಪಟ್ಟಕ್ಕೆ ಸಮ್ಮತಿಕೊಟ್ಟರೆ ಮಠದ ಆಡಳತೆಯು ಕೃಷ್ಣಯ್ಯನವರಿಗೇ ಕೊಡುವೆವೆಂತಲೂ ಇನ್ನು ಮುಂದೆ ಕೂಡ ಅವರ ಕುಟುಂಬದೊಳಗಿಂದಲೇ ಶಿಷ್ಯರನ್ನು ಆರಿಸುವುದಾಗಿಯೂ ಕೃಷ್ಣಯ್ಯನವರಿಗೆ ತಿಳಿಸಿದರೆ ಅವರು ಬಹಳ ಮಾಡಿ ಕಬೂಲಿಪಟ್ಟು ಹುಡುಗನನ್ನು ಕೊಡಬಹುದು ಎಂದು ತೋರುವದರಿಂದ, ಅದರಂತೆ ಅವರಿಗೆ ಹೇಳಬೇಕು ಎಂದು ಗೋಕರ್ಣದ ಹತ್ತು ಜನರಿಗೆ ಬರೆದು ತಿಳಿಸಿದರು. ಆ ಪ್ರಕಾರ ಗೋಕರ್ಣದ ಜನರು ಕೃಷ್ಣಯ್ಯ ಶಾನುಭಾಗರಿಗೆ ತಿಳಿಸಿ ಅವರಿಂದ ಒಪ್ಪಿಗೆಯನ್ನು ಪಡೆದರು. ಹಾಗೂ ಅದರಂತೆ ಬರಹ ಮೂಲಕ ಹತ್ತು ಜನರು ಮುಚ್ಚಳಿಕೆಯನ್ನು ಬರೆದುಕೊಟ್ಟರು. ಆ ಮುಚ್ಚಳಿಕೆಯಲ್ಲಿ ಮೇಲಿನ ಕರಾರುಗಳ ಹೊರ್ತು ಕೃಷ್ಣಯ್ಯನವರ ಕುಟುಂಬದಲ್ಲಿ ಶಿಷ್ಯರಾಗಲಿಕ್ಕೆ ಯೋಗ್ಯ ಹುಡುಗನು ಇಲ್ಲದಿದ್ದರೆ ಅವರು ಬೇರೆ ಕುಟುಂಬದಿಂದ ಆರಿಸಿ ತಂದ ಹುಡುಗನನ್ನು ಶಿಷ್ಯಸ್ವೀಕಾರ ಮಾಡಲಾದೀತೆಂತಲೂ ನಮೂದಿಸಲಾಗಿತ್ತು. ಆಮೇಲೆ ಕೃಷ್ಣಯ್ಯನವರ ಮಗನಾದ

ಮರ್ತುರ್ ಎಂಬ ಪಟುವನ್ನು ಕರತರಿಸಿ ೧೭೨೦ನೇ ಇಸ್ವಿಯಲ್ಲಿ, ಶಾರ್ವರೀ ಸಂವತ್ಸರದ ಚೈತ್ರ ಶುದ್ಧ ೧೫ನೇ ದಿವಸ **ಶಂಕರಾಶ್ರಮಸ್ವಾಮಿ** ಎಂಬ ಅಭಿಧಾನವನ್ನು ಕೊಟ್ಟು ಶಿಷ್ಯ ಸ್ವೀಕಾರವು ಗೋಕರ್ಣ ಮಠದಲ್ಲಿ ಮಾಡ ಲ್ಪಟ್ಟಿತು. ಈ ಸಮಯದಲ್ಲಿ ಕೃಷ್ಣಯ್ಯ ಶಾನುಭಾಗರಿಗೆ ಹಾಗೂ ಅವರ ಸಂತತಿಯವರಿಗೆ ಶುಕ್ಲ ಭಟ್ಟ ಎಂಬ ಬಿರುದು ಕೊಡಲಾಯಿತಲ್ಲದೆ, ಕೃಷ್ಣಯ್ಯನವರಿಗೆ ಮಠದ ಆಡಳಿತೆಗಾರ (ಮಣೆಗಾರ) ಎಂದು ನೇಮಿಸ ಲಾಯಿತು. ಈ ಕೃಷ್ಣಯ್ಯ ಶಾನುಭಾಗರ ಸಂತತಿಯವರು ಈಗ ಮೂರು ಗುಂಪುಗಳಾಗಿ ಶಿರಾಲಿ, ಮಂಗಳೂರು, ಹಾಗೂ ಮಲ್ಲಾಪುರದಲ್ಲಿ ಇರು ತ್ತಾರೆ. ಮೊದಲನೆ **ಪರಿಜ್ಞಾನಾಶ್ರಮ** ಗುರುಗಳ ಆಳ್ವಿಕೆಯು ೧೭೦೮ ರಿಂದ ೧೭೨೦ರ ವರೆಗೆ ನಡೆಯಿತು. ಇವರು ವೃಂದಾವನಸ್ಥರಾದದ್ದು ಶಾರ್ವರೀ ಸಂವತ್ಸರದ ಚೈತ್ರ ಬಹುಳ ೧೪ ನೇ ದಿವಸವಾಗಿರು ತ್ತದೆ. ಇವರ ಸಮಾಧಿಯು ಗೋಕರ್ಣ ಭಂಡಿಕೇರಿ ಮಠದಲ್ಲಿ ಇರುತ್ತದೆ.

## ಅಧ್ಯಾಯ ೨

## ೨ನೇ ಗುರುಗಳು — ಶ್ರೀ ಶಂಕರಾಶ್ರಮ ಸ್ವಾಮಿಗಳು

ಇವರ ಆಳ್ವಿಕೆಯು ಸನ್ ೧೭೨೦ ರಿಂದ ೧೭೫೭ ಆಗಿರುತ್ತದೆ. ಇವರು ಜಾಣರೂ ವಿದ್ಯಾವಂತರೂ ಆಗಿದ್ದರು. ಯಾವಾಗಲೂ ವಿವಿಧ ವಿಷಯ ಗಳನ್ನು ಬಹಳ ಶೋಧಕ ದೃಷ್ಟಿಯಿಂದ ಪರೀಕ್ಷಿಸಿ ತಿಳಿದುಕೊಳ್ಳುತ್ತಿದ್ದರು. ಇವರು ಆಗಿಂದಾಗ್ಯೆ ನಮ್ಮ ಜನರು ಇರುವ ಊರುಗಳಲ್ಲಿ ಸಂಚಾರಮಾಡು ತ್ತಿದ್ದರು. ಆಗ ಜನರು ತಮ್ಮ ತಮ್ಮ ಮನೆಗಳಲ್ಲಿ ಅವರನ್ನು ಆದರದಿಂದ ಬರಮಾಡಿಕೊಂಡು ಅವರಿಗೆ ಪಾದಪೂಜೆ, ಭಿಕ್ಷೆಯಿಂದ ಸತ್ಕರಿಸಿ ಕಳುಹಿಸು ತ್ತಿದ್ದರು. ಹೀಗಿರುವಲ್ಲಿ ಅವರು ಒಮ್ಮೆ ಭಟ್ಕಳಕ್ಕೆ ಹೋದಾಗ ಅವರನ್ನು ಅಲ್ಲಿಯ ನಮ್ಮ ಜನರು ತಕ್ಕ ರೀತಿಯಿಂದ ಸತ್ಕಾರಮಾಡಲಿಲ್ಲ. ಅವರ ದೇಹದಲ್ಲಿಯೂ ಆಗ ಸ್ವಲ್ಪ ಅಸ್ವಸ್ಥತೆ ಇತ್ತು. ಈ ಎರಡೂ ಕಾರಣಗಳಿಂದ

ಅವರ ಮನಸ್ಸಿಗೆ ಸ್ವಲ್ಪ ಬೇಸರವಾಗಿ ಅವರು ಆ ಅಸ್ವಸ್ಥ ಸ್ಥಿತಿಯಲ್ಲಿಯೇ ತಮ್ಮ ವಾಸಸ್ಥಾನದ ಗೋಕರ್ಣ ಭಂಡಿಕೇರಿ ಮಠಕ್ಕೆ ಕೂಡಲೇ ಹೋಗಲಿಕ್ಕೆ ಹೊರಟು ಶಿರಾಲಿಗೆ ಬಂದರು. ಶಿರಾಲಿ ಜನರು ಅವರನ್ನು ಯೋಗ್ಯ ಸತ್ಕಾರಮಾಡಿ ಅವರು ಅಸ್ವಸ್ಥರಿದ್ದುದರಿಂದ ಗುಣಮುಖ ವಾಗುವ ವರೆಗೆ ತಮ್ಮಲ್ಲಿಯೇ ಉಳಿಯಬೇಕಾಗಿ ಬಿನ್ನೈಸಿ ಅವರನ್ನು ಮುಂದಕ್ಕೆ ಹೋಗಗೊಡದೆ ತಮ್ಮಲ್ಲಿಯೇ ನಿಲ್ಲಿಸಿಕೊಂಡರು. ಆದರೆ ಅವರ ಆರೋಗ್ಯ ಕ್ರಮೇಣ ಕೆಡುತ್ತಹೋದುದರಿಂದ ಅವರ ಅವಸಾನ ಕಾಲ ಸಮೀಪಿಸಿರಬಹುದೆಂಬ ಭೀತಿ ಜನರಲ್ಲಿ ಉಂಟಾಗಿ ತ್ವರ್ಯ ದಲ್ಲಿಯೇ ಶಿಷ್ಯಸ್ವೀಕಾರ ಮಾಡಿಕೊಳ್ಳಬೇಕಾಗಿ ಗುರುಗಳನ್ನು ಜನರು ಪ್ರಾರ್ಥಿಸಿಕೊಂಡರು. ಆದರೆ ಅವರಿಗೆ ಭಟ್ಕಳದಲ್ಲಿ ಜನರು ದುರ್ಲಕ್ಷ್ಯ ಮಾಡಿದ್ದರಿಂದ ಅವರ ಮನಸ್ಸಿಗೆ ತಾಪವಾಗಿ ತಾನು ಶಿಷ್ಯನನ್ನು ಮಾಡಿ ಕೊಳ್ಳುವದಿಲ್ಲವೆಂಬುದಾಗಿ ಖಂಡಿತಹೇಳಿದರು. ಅವರು ಫಕ್ಕನೆ ಮುಕ್ತ ರಾದರೆ ಅವರ ಸಮಾಧಿಯು ಎಲ್ಲಿ ಆಗಬೇಕಾದೀತು ಎಂಬ ವಿಚಾರವು ಆಗ ಜನರಲ್ಲಿ ಬಂದು ಇದರ ಕುರಿತು ಅವರು ತಮ್ಮತಮ್ಮೊಳಗೆ ಚರ್ಚೆ ಮಾಡುತ್ತ ಕುಳಿತ್ತಿರುವ ಸಮಯದಲ್ಲಿ ಅಲ್ಲಿ ಕೂಡಿದ ಜನರಲ್ಲಿ ನಮ್ಮ ಸಮಾಜದಲ್ಲಿ ಪ್ರಸಿದ್ಧರಾದ ನಾಗರಕಟ್ಟೆ ವಕೀಲ ಶಿವರಾಮಪ್ಪನವರ ಪೂರ್ವಜರೊಬ್ಬರು, ತಾವು ಇದ್ದ ಮನೆ ಜಾಗವನ್ನು ಗುರುಗಳ ಸಮಾಧಿ ಬಗ್ಯೆ ಕೊಡುತ್ತೇವಾಗಿ ಹೇಳಿದರು. ಇದಾದ ಕೆಲವು ದಿವಸಗಳಲ್ಲಿಯೇ ಗುರುಗಳ ಆಲಸ್ಯವು ಅತಿ ವಿಕೋಪಕ್ಕೆ ಮುಟ್ಟಿ ಅದರಲ್ಲಿಯೇ ಅವರು ಈಶ್ವರ ಸಂವತ್ಸರದ ಅಶ್ವಿನ ಶುದ್ಧ ೬ನೇ ದಿವಸ ಮುಕ್ತರಾದರು. ಅವರ ಅಂತ್ಯವಿಧಿ ಮುಂತಾದ ಸತ್ಕಾರ್ಯಗಳನ್ನು ಅಲ್ಲಿ ಆ ಕಾಲದಲ್ಲಿ ಉತ್ತರ ಹಿಂದೂಸ್ಥಾನದಿಂದ ಬಂದಿದ್ದ ಒಬ್ಬ ಬ್ರಾಹ್ಮಣ ಸನ್ಯಾಸಿಯ ಕಡೆಯಿಂದ ನೆರವೇರಿಸಿಕೊಂಡರು. ಅವರ ಸಮಾಧಿಯು ನಾಗರಕಟ್ಟೆಕಾರರು ಕೊಡ ಲೊಪ್ಪಿದ ಜಾಗದಲ್ಲಿ ಆಗಿ, ಅಲ್ಲಿ ಭವಾನೀಶಂಕರ ದೇವರ ಮೂರ್ತಿಯನ್ನು ಸ್ಥಾಪಿಸಿ ಮಠವನ್ನು ಕಟ್ಟಿಸಿದರು. ಇದೇ ನಮ್ಮ ಶ್ರೀ ಚಿತ್ರಾಪುರ ಮಠ ವಾಗಿರುತ್ತದೆ. ಆ ಮಠದಲ್ಲಿ ಮುಖ್ಯ ಸಮಾಧಿಯು ಇದೇ ಆಗಿರುತ್ತದೆ. ಇದಕ್ಕೆ **"ಹೋಡಿ ಸಮಾಧಿ"**ಅನ್ನುತ್ತಾರೆ. ನಾಗರಕಟ್ಟೆಕಾರರು ಮಠವನ್ನು ಸ್ಥಾಪಿಸಲಿಕ್ಕೆ ಹಾಗೂ ಗುರುಗಳ ಸಮಾಧಿ ಬಗ್ಯೆ ಗುರುಭಕ್ತಿಯಿಂದ ತಾವು

ಸ್ಥಳವನ್ನು ಕೊಟ್ಟ ಬಗ್ಗೆ ಅವರ ಸ್ಮರಣಾರ್ಥವಾಗಿ ಅವರ ವಂಶಜವರಿಗೆ ಮಠದಲ್ಲಿ ನಡೆಯುವ ಯಾವತ್ತೂ ಸತ್ಕಾರ್ಯಗಳಲ್ಲಿ ಮೊದಲನೆ ಮರ್ಯಾದೆ ( ಪಹಿಲೊ ವೀಡೊ ) ಸಲ್ಲುತ್ತದೆ. ಈ ನಮ್ಮ ಗುರುಗಳು ಶಿಷ್ಯ ಸ್ವೀಕಾರಮಾಡದೇ ಮುಕ್ತರಾದ್ದರಿಂದ ನಮಗೆ ಮೊದಲು ಗುರು ಇಲ್ಲದ ವೇಳೆಯಲ್ಲಿ ಯಾವ ಸ್ಥಿತಿ ಬಂದಿತ್ತೊ ಅದೇ ಸ್ಥಿತಿ ಪುನಹಾ ಒದಗಿತು. ನಗರಸಂಸ್ಥಾನದ ದರಬಾರದಲ್ಲಿ ನಮಗೆ ಹಿಂದಕ್ಕೆ ದ್ವೇಷಮಾಡುತ್ತಿದ್ದ ಅಧಿಕಾರಿಗಳು ಸಂಸ್ಥಾನದ ಅಧಿಪತಿಗೆ ಪುನಃ ಮೊದಲಿನಂತೆಯೇ ನಮಗೆ ಈಗ ಗುರುಗಳಿಲ್ಲವೆಂತಲೂ ನಮ್ಮ ಮಠಕ್ಕೆ ವಾರಿಸುದಾರರು ಯಾರೂ ಇಲ್ಲದ್ದರಿಂದ ಮಠಕ್ಕೆ ಬೀಗಮುದ್ರೆ ಹಾಕಬೇಕಾಗಿಯೂ ಮಠದ ಚರ - ಸ್ಥಿರ ಜಿಂದಿಗೆಗಳನ್ನು ಸಂಸ್ಥಾನಕ್ಕೆ ಜಪ್ತಿಮಾಡಿಸಬೇಕಾಗಿಯೂ ಹೇಳಿ ಅದರಂತೆ ಮಾಡಲಿಕ್ಕೆ ಹುಕುಂ ಪಡಕೊಂಡರು. ಅವರಲ್ಲಿ ಒಬ್ಬ ಅಧಿಕಾರಿಯು ಗುರುಗಳ ಸಮಾಧಿ ಮೇಲೆ ಇಟ್ಟ ಮಣ್ಣಿನ ಲಿಂಗವನ್ನು ನೀರುಸುರಿದು ತೊಳೆದುಹಾಕಬೇಕಾಗಿ ತನ್ನ ಕೈಕೆಳಗಿನ ಒಬ್ಬ ಮನುಷ್ಯನಿಗೆ ಹುಕುಂ ಕೊಟ್ಟಿದ್ದನಂತೆ. ಆ ಪ್ರಕಾರ ಅವನು ಬಂದು ಲಿಂಗದ ಮೇಲೆ ಎಷ್ಟು ನೀರು ಸುರಿದರೂ ಅದು ತೊಳೆದು ಹೋಗಲಿಲ್ಲ. ಆಗ ಅವನು ಆ ಲಿಂಗವನ್ನು ಒಡೆಯಲಿಕ್ಕೆ ಬಹಳ ಪ್ರಯತ್ನ ಮಾಡಿದನು. ಅದು ಕೂಡ ಅವನಿಂದ ಸಾಧ್ಯವಾಗಲಿಲ್ಲ. ಈ ಚಮತ್ಕಾರವನ್ನು ನೋಡಿ ಅವನು ಗಾಬರಿಯಾಗಿ ವಿಸ್ಮಯಪಟ್ಟು ತನಗೆ ಹುಕುಂ ಕೊಟ್ಟ ಅಧಿಕಾರಿ ಕಡೆಗೆ ಹೋಗಿ ಅಲ್ಲಿ ನಡೆದ ಸಂಗತಿಯನ್ನು ವಿವರವಾಗಿ ತಿಳಿಸಿದನು. ಅದೇ ದಿವಸ ರಾತ್ರೆ ಅವನೂ ಹಾಗೂ ಹುಕುಂ ಕೊಟ್ಟ ಅಧಿಕಾರಿಯೂ ರಕ್ತವನ್ನು ಕಾರಿ ತೀರಿಕೊಂಡರು. ಇದನ್ನು ಸಂಸ್ಥಾನದ ಅಧಿಕಾರ ವರ್ಗದವರು ಕೇಳಿ ಭೀತಿಪಟ್ಟು ಮುಂದಿನ ಜಪ್ತಿಕೆಲಸಕ್ಕೆ ಕೈಹಾಕದೆ ಸುಮ್ಮನಾದರು. ಇತ್ತಲಾಗೆ ನಮ್ಮ ಜನರಾದರೂ ಸುಮ್ಮನೆ ಉಳಿಯಲಿಲ್ಲ. ನಮ್ಮ ಮುಕ್ತರಾದ ಗುರುಗಳ ಉತ್ತರಾಧಿಕಾರಿಯು ತ್ವರೆಯಲ್ಲಿಯೇ ನೇಮಿಸಲ್ಪಡುವರೆಂತಲೂ ಆ ವರೆಗೆ ಜಪ್ತಿಕೆಲಸ ತಹಖೂಬ್ ಇಡಬೇಕಾಗಿಯೂ ಸಂಸ್ಥಾನದ ಅಧಿಪತಿಗೆ ಅರ್ಜಿಮಾಡಿಕೊಂಡರು. ಅದಕ್ಕೆ ಅಧಿಪತಿಯು ಒಪ್ಪಿ ನಮ್ಮ ಜನರು ಉತ್ತರಾಧಿಕಾರಿಯನ್ನು ಬೇಗನೇ ನೇಮಿಸಿಕೊಂಡು ತಿಳಿಸಬೇಕಾಗಿಯೂ ಇಲ್ಲದಿದ್ದರೆ ಪುನಃ ಜಪ್ತಿ ವಾರಂಟು ಕೊಡಲಾದೀತೆಂತಲೂ ಹುಕುಂ ಕೊಟ್ಟರು.

## ಅಧ್ಯಾಯ ೩

## ೩ನೇ ಗುರುಗಳು—೨ನೆಯ ಶ್ರೀ ಪರಿಜ್ಞಾನಾಶ್ರಮರು

ಈಗ ನಮ್ಮ ಜನರು ಗುರುಗಳ ಉತ್ತರಾಧಿಕಾರಿಯಾಗಲಿಕ್ಕೆ ಯಾರು ದೊರಕಬಹುದೆಂಬ ಕುರಿತು ವಿಚಾರ ಮಾಡತೊಡಗಿದರು. ಆ ಸಮಯ ದಲ್ಲಿ ಅಲ್ಲಿ ಕುಳಿತಿದ್ದ ಒಬ್ಬ ಹಿರಿಯ ಮನುಷ್ಯನು "ನಮ್ಮ ಶಂಕರಾಶ್ರಮ ಸ್ವಾಮಿಗಳಿಂದ ಧೀಕ್ಷೆ ಪಡಕೊಂಡು ಆಪ್ ಸನ್ಯಾಸಿಯಾಗಿ ಯೋಗಸಾಧನೆ ಮಾಡಿಕೊಂಡು ಇದ್ದ ಶಿರಾಲಿ ಪಂಡಿತ ಮನೆತನದ ಒಬ್ಬರು ಕೊಲ್ಲೂರಲ್ಲಿ ಇದ್ದಾರೆ. ಅವರು ನಮ್ಮ ಗುರುಗಳಾಗಲಿಕ್ಕೆ ಬಹಳ ಯೋಗ್ಯ ಮನುಷ್ಯ ರಾಗಿ ಕಾಣುವದರಿಂದ ಅವರನ್ನು ನಮ್ಮ ಗುರುಗಳನ್ನಾಗಿ ಮಾಡಿಕೊಳ್ಳ ಬಹುದು" ಎಂದು ಸೂಚಿಸಿದನು. ಇದನ್ನು ಎಲ್ಲ ಜನರು ಮಾನ್ಯ ಮಾಡಿದರು. ಮತ್ತು ಕೆಲವು ಪ್ರಮುಖ ಜನರು ಕೊಲ್ಲೂರಿಗೆ ಹೋಗಿ ಆ ಸನ್ಯಾಸಿಯನ್ನು ಭೇಟಿಯಾಗಿ ಅವರಿಗೆ ಎಲ್ಲ ಸಂಗತಿಯನ್ನು ಹೇಳಿ ನಮಗೆ ತಾವು ಗುರುಗಳಾಗಿ ನಮ್ಮನ್ನು ಉದ್ಧಾರಮಾಡಬೇಕಾಗಿ ಅವರನ್ನು ಬೇಡಿಕೊಂಡರು. ಅದನ್ನು ಕೇಳಿ ಅವರು ವಿರಕ್ತ ಸನ್ಯಾಸಿಯಾಗಿದ್ದರೂ ನಮ್ಮ ಕಷ್ಟಗಳನ್ನು ಅರಿತು ದಯಾಪರರಾಗಿ ನಮ್ಮ ಅರಿಕೆಯನ್ನು ಮಾನ್ಯ ಮಾಡಿ ಚಿತ್ರಾಪುರಕ್ಕೆ ಬಂದು ನಮ್ಮ ಗುರುತ್ವವನ್ನೂ, ಶ್ರೀ ಮಠದ ಆಧಿಪತ್ಯ ವನ್ನೂ ಸ್ವೀಕರಿಸಿದರು. ಇವರು **ಎರಡನೇ ಪರಿಜ್ಞಾನಾಶ್ರಮ ಸ್ವಾಮಿ** ಎಂಬ ಅಭಿದಾನದಿಂದ ಪ್ರಖ್ಯಾತರಾದರು. ಇವೆಲ್ಲ ಸಂಗತಿಗಳನ್ನು ನಮ್ಮ ಚಿತ್ರಾಪುರದ ಜನರು ನಗರ ಸಂಸ್ಥಾನದ ಅಧಿಪತಿಗೆ ತಿಳಿಸಲು ಅವರು ಸಮಾಧಾನಪಟ್ಟು ಹಿಂದಕ್ಕೆ ಕೊಟ್ಟ ಜಪ್ತಿ ಹುಕುಮನ್ನು ರದ್ದುಪಡಿಸಿದರು.

ಇವರ ಆಳ್ವಿಕೆಯು ಸನ್ ೧೭೫೭ ರಿಂದ ೧೭೭೦ ಆಗಿರುತ್ತದೆ. ಇವರು ಮೇಲೆ ಬರೆದಂತೆ ಮಹಾ ತಪಸ್ವಿಗಳೂ ಹಾಗೂ ದೊಡ್ಡ ಯೋಗಿ ಗಳೂ ಆಗಿದ್ದುದರಿಂದ ಮಠದ ಆಡಳಿತೆಯಲ್ಲಿ ಇವರು ವಿಶೇಷ ಲಕ್ಷ್ಯ ಕೊಡುತ್ತಿರಲಿಲ್ಲ. ಯಾವಾಗಲೂ ಯೋಗಾಭ್ಯಾಸದಲ್ಲಿಯೇ ಮಗ್ನರಾಗು ತ್ತಿದ್ದರು. ಅವರು ಕೊಲ್ಲೂರಿಗೆ ಹೋಗಿ ಅಲ್ಲಿ ತಮ್ಮ ವಿಶೇಷ ಕಾಲವನ್ನು ಏಕಾಂತದಲ್ಲಿ ಕಳೆಯುತ್ತಿದ್ದರು. ಅವರಿಗೆ ಕ್ರಮೇಣ ವೃದ್ಧಾಪ್ಯ ಬಂದ ಮೇಲೆ ಅವರ ಗಾದಿಗೆ ಮುಂದೆ ಉತ್ತರಾಧಿಕಾರಿಯನ್ನು ನೇಮಿಸಿಕೊಳ್ಳುವ

ಅವಶ್ಯಕತೆಯಾಗಿ ಅವರು ಮಠದ ಶಾಸನದಂತೆ ಶುಕ್ಲ ಭಟ್ಟರ ಕುಟುಂಬ ದೊಳಗಿಂದ ಒಬ್ಬ ಯೋಗ್ಯ ಹುಡುಗನನ್ನು ಆರಿಸಿ ತಂದು ಅವನನ್ನು ಶಿಷ್ಯನನ್ನಾಗಿ ಮಾಡಿಕೊಂಡರು. ಅವರು **೨ನೆಯ ಶಂಕರಾಶ್ರಮ ಸ್ವಾಮಿ** ಎಂಬ ಅಭಿದಾನದಿಂದ ಮುಂದೆ ಪ್ರಖ್ಯಾತರಾದರು. ಪರಿಜ್ಞಾನಾಶ್ರಮ ಗುರುಗಳು ಸನ್ ೧೭೭೦ ನೇ ಇಸ್ವಿಯಲ್ಲಿ ಅಂದರೆ ವಿಕೃತು ಸಂವತ್ಸರದ ಭಾದ್ರಪದ ಬ. ೧೧ ನೇ ದಿವಸ ಮುಕ್ತರಾದರು. ಇವರ ಸಮಾಧಿಯು ಶ್ರೀ ಚಿತ್ರಾಪುರ ಮಠದಲ್ಲಿ ಮುಖ್ಯ ಸಮಾಧಿಯ ಬಲಬದಿಗೆ ಇರುತ್ತದೆ.



## ಅಧ್ಯಾಯ ೪

## ೪ನೇ ಗುರುಗಳು — ೨ನೆಯ ಶ್ರೀ ಶಂಕರಾಶ್ರಮ ಸ್ವಾಮಿಗಳು

ಇವರ ಆಳ್ವಿಕೆಯು ಸನ್ ೧೭೭೦ ರಿಂದ ೧೭೮೫ ಆಗಿರುತ್ತದೆ. ಇವರು ಕುಮಠೆಯ ಸಮೀಪವಿರುವ ಮಲ್ಲಾಪುರದ ಶುಕ್ಲಭಟ್ಟರ ವಂಶದವರಾದ್ದ ರಿಂದ ಇವರ ಶಿಷ್ಯಸ್ವೀಕಾರವು ಮಲ್ಲಾಪುರದಲ್ಲಿಯೇ ಆಗಿತ್ತು. ಇವರು ಯೋಗಿಗಳೂ, ಪ್ರಬಲ ವಿದ್ವಾಂಸರೂ ಆಗಿದ್ದರು. ಇವರಲ್ಲಿ ವಾಕ್‌ಸಿದ್ಧಿ ಇತ್ತು. ಮುಂದಿನ ಎಲ್ಲ ಗುರುಗಳು ಇವರ ಸಮಾಧಿಯಲ್ಲಿ ಪೂಜ್ಯ ಬುದ್ಧಿ ಇಟ್ಟು ನಡೆಯುತ್ತಿದ್ದರು. ಇವರ ಕೀರ್ತಿಯು ಎಲ್ಲ ಕಡೆಗೂ ಪಸರಿಸಿತ್ತು. ದೂರದೂರ ದೇಶದ ಜನರು ಸಹ ಈ ಸಮಾಧಿಗೆ ಭಕ್ತಿ ಯಿಂದ ನಡೆದುಕೊಳ್ಳುತ್ತಿದ್ದರು. ಇವರು ಪ್ರತ್ಯಕ್ಷ ಶ್ರೀ ದತ್ತಾತ್ರೇಯನ ಅವತಾರವೇ ಎಂತ ಜನರು ಎಣಿಸುತ್ತಿದ್ದರು. ಯಾರಿಗಾದರೂ ಏನಾದರೂ ಸಂಕಷ್ಟ ಬಂದರೆ ಅವರು ಈ ಗುರುಗಳ ಕಡೆಗೆ ಬಂದು ಭಕ್ತಿ ಪೂರ್ವಕ ವಾಗಿ ದೃಢ ವಿಶ್ವಾಸವಿಟ್ಟು ಹೇಳಿಕೊಂಡರೆ ಇವರ ಆಶೀರ್ವಾದದಿಂದಲೇ ಅವರ ಕಷ್ಟವು ಪರಿಹಾರವಾಗುತ್ತಿತ್ತು. ಇವರು ತಮ್ಮ ದೇಹದ ಕಡೆಗೆ ಹೆಚ್ಚು ಲಕ್ಷ್ಯ ಕೊಡುತ್ತಿರಲಿಲ್ಲವಾದ್ದರಿಂದ ದೇಹದಲ್ಲಿ ಅಸ್ವಸ್ಥತೆಯು ಮೇಲಿಂದ ಮೇಲೆ ತಲೆದೋರುತ್ತಿತ್ತು. ಕಾರಣ ಶಿಷ್ಯನನ್ನು ಬೇಗನೇ ಮಾಡಿಕೊಳ್ಳುವದು ಅವಶ್ಯವೆಂದು ಎಣಿಸಿ ಶುಕ್ಲಭಟ್ಟರ ವಂಶದಲ್ಲಿ ಯೋಗ್ಯ

ಹುಡುಗನು ಸಿಗದೇ ಇದ್ದುದರಿಂದ ಕಂಡ್ಲೂರಕಾರ (ಈಗ ತಲಗೇರಿ ಅನ್ನುತ್ತಾರೆ) ಕುಟುಂಬದ ಒಬ್ಬ ಯೋಗ್ಯನಾದ ಹುಡುಗನನ್ನು ಆರಿಸಿ ತಂದು ಅವನನ್ನು ಪ್ಲವ ಸಂವತ್ಸರದ ಮಾಘ ಶುದ್ಧ ೧೦ ನೇ ದಿವಸ (ಸನ್ ೧೭೭೧ ಇಸ್ವಿ) ಶಿಷ್ಯನನ್ನಾಗಿ ಮಾಡಿಕೊಂಡರು. ಅವರೇ ಮುಂದೆ **ಕೇಶವಾಶ್ರಮ ಸ್ವಾಮಿ** ಎಂಬ ಅಭಿದಾನದಿಂದ ಪ್ರಖ್ಯಾತರಾದರು. ಈ ಶಂಕರಾಶ್ರಮ ಗುರುಗಳ ತಪೋಬಲದ ಸಾಮರ್ಥ್ಯವು ಅನುಭವಕ್ಕೆ ಬಂದ ಉದಾಹರಣೆಗಳು ಬಹಳ ಇರುತ್ತವೆ. ಅವುಗಳಲ್ಲಿ ಹೆಚ್ಚಾಗಿ ಕೇಳಿಕೆಯಲ್ಲಿ ಬಂದ ೪ ಉದಾಹರಣೆಗಳನ್ನು ಕೆಳಗೆ ಬರೆಯುವೆನು.

(೧) ಇವರು ಯಾವಾಗಲೂ ಯೋಗ-ಜಪತಪಗಳಲ್ಲಿ ಮಗ್ನರಾಗುತ್ತಿದ್ದುದರಿಂದ ತಮ್ಮ ಆರೋಗ್ಯದ ಕಡೆಗೆ ಎಂದೂ ವಿಶೇಷ ಲಕ್ಷ್ಯಕೊಡುತ್ತಿದ್ದಿಲ್ಲ. ಅದರ ಪರಿಣಾಮವಾಗಿ ಅವರಿಗೆ ಶೀತಜ್ವರ ಬರುತ್ತಿತ್ತು. ಜ್ವರ ಬಂದಾಗ್ಯಾದರೂ ಅವರ ನೇಮದ ಅನುಷ್ಠಾನಗಳಲ್ಲಿ ಕುಂದು ಆಗಗೊಡುತ್ತಿದ್ದಿಲ್ಲ. ಅನುಷ್ಠಾನದ ವೇಳೆಯಲ್ಲಿ ಜ್ವರ ಬಂದರೆ ಅನುಷ್ಠಾನಕ್ಕೆ ಕುಳಿತುಕೊಳ್ಳುವಾಗ ತಮ್ಮ ಆ ಜ್ವರವನ್ನು ತಮ್ಮ ದಂಡದ ಮೇಲೆ ಆವಾಹನ ಮಾಡುತ್ತಿದ್ದರಂತೆ. ಅನುಷ್ಠಾನ ಮುಗಿದ ಮೇಲೆ ದಂಡದ ಮೇಲೆ ಆವಾಹನ ಮಾಡಿದ ಜ್ವರವನ್ನು ತಮ್ಮ ಮೈಯೊಳಗೆ ತಿರಿಗಿ ಪಡಕೊಳ್ಳುತ್ತಿದ್ದರು.

(೨) ಈ ಗುರುಗಳು ಮುಂಜಾನೆ ತಮ್ಮ ಅನುಷ್ಠಾನ ಮುಗಿದ ಮೇಲೆ ಗಂಜಿ ಊಟ ಮಾಡುವ ರೂಢಿ ಇಟ್ಟಿದ್ದರು. ಒಮ್ಮೆ ಹೀಗಾಯಿತು-ಮುಕ್ತರಾದ ಇವರ ಗುರು ಶ್ರೀ ಪರಿಜ್ಞಾನಾಶ್ರಮ ಸ್ವಾಮಿಯವರ ಪುಣ್ಯತಿಥಿಯ ಒಂದು ದಿವಸ ಬಂತು. ಆ ದಿವಸ ಇವರು ಬೆಳಿಗ್ಯೆ ಗಂಜಿ ಊಟ ಮಾಡುವದು ಇವರ ಶಿಷ್ಯರಾದ ಕೇಶವಾಶ್ರಮ ಸ್ವಾಮಿಗಳಿಗೆ ಸರಿದೋರದ ಅವರು ಆ ದಿವಸ ಗಂಜಿ ಮಾಡುವ ಅವಶ್ಯವಿಲ್ಲೆಂದು ಅಡಿಗೆಯವರಿಗೆ ಹೇಳಿ ಅದನ್ನು ಮಾಡಿಸಲಿಲ್ಲ. ಶಂಕರಾಶ್ರಮ ಗುರುಗಳಿಗೆ ಇದು ಗೊತ್ತಾಗಲಿಲ್ಲ. ಇವರು ಎಂದಿನಂತೆಯೇ ತಮ್ಮ ಅನುಷ್ಠಾನವನ್ನು ಮುಗಿಸಿ ಗಂಜಿ ಊಟ ಮಾಡಲಿಕ್ಕೆಂದು ಅಡಿಗೆ ಮನೆಗೆ ಹೋದರು. ಅಲ್ಲಿ ಅದರ ತಯಾರಿ ಏನೂ ಕಾಣಿಸಲಿಲ್ಲ. ಅವರು ಅಡಿಗೆಯವರಿಗೆ ಅದರ ಕಾರಣವನ್ನು ಕೇಳಲು, ಅಡಿಗೆಯವರು ನಡೆದ ಸಂಗತಿಯನ್ನು ಅಂದರೆ, ಸಣ್ಣ ಗುರುಗಳು ಗಂಜಿಯನ್ನು ಮಾಡುವ ಅವಶ್ಯವಿಲ್ಲ, ಊಟದ

ತಯಾರಿಯೇ ಬೇಗನೆ ಆಗಲಿ ಎಂತ ಹೇಳಿದ್ದರಿಂದ ಗಂಜಿ ಮಾಡಲಿಲ್ಲ ಎಂದು ಹೇಳಿದರು. ಒಳ್ಳೇದು ಎಂದು, ಗುರುಗಳು ಹೇಳಿ ಹಾಗೆಯೇ ತಮ್ಮ ಕೋಣೆಯಲ್ಲಿ ಹೋಗಿ ವಿಶ್ರಾಂತಿ ಪಡೆದರು. ಇಷ್ಟರಲ್ಲಿ ಅಡಿಗೆ ಕೋಣೆಯಲ್ಲಿ ಒಂದು ಚಮತ್ಕಾರವಾಯಿತು. ದೇವರ ನೈವೇದ್ಯಕ್ಕೆ ವಡೆಗಳು ಎಣ್ಣೆ ಕಾವಲಿಯಿಂದ ಸುಟ್ಟು ಬರಲಿಲ್ಲ. ಎಷ್ಟು ಬೆಂಕಿ ಮಾಡಿ ದರೂ ಅವು ಕಾವಲಿಯ ತಳಕ್ಕೆ ಹೋಗಿ ಕೂಡ್ರುತ್ತವೆ ಹೊರತು ಸುಟ್ಟು ಮೇಲೆ ಬರುವದಿಲ್ಲ. ಇದನ್ನು ನೋಡಿ ಅಡಿಗೆಯವರು ಹಾಗೂ ಅಲ್ಲಿ ನೆರೆದಿದ್ದ ಜನರು ಇದೇನು ಆಶ್ಚರ್ಯವೆಂದು ಗಾಬರಿಯಾಗಿ, ಸಣ್ಣ ಗುರು ಗಳಾದ ಕೇಶವಾಶ್ರಮ ಸ್ವಾಮಿಗಳವರ ಕಡೆಗೆ ಹೋಗಿ ಹೇಳಿಕೊಂಡರು. ಅವರು ಅಡಿಗೆಯವರಿಗೆ, "ಹೆಚ್ಚು ಉರಿಮಾಡಿದರೆ ಯಾಕೆ ಸುಡುವದಿಲ್ಲ, ನಿಷ್ಕಾಳಜಿ ಇದ್ದೀರಿ" ಎಂದು ಗದರಿಸಿದರು. ಅದಕ್ಕೆ ಎಲ್ಲ ಜನರು "ಇದರಲ್ಲಿ ಅಡಿಗೆಯವರ ತಪ್ಪು ಏನೂ ಇಲ್ಲ, ಅವರು ಎಷ್ಟು ಉರಿ ಮಾಡಿ ದರೂ ವಡೆಗಳು ಸುಟ್ಟು ಬರುವುದಿಲ್ಲೆಂಬುದು ನಿಜ, ಇದರ ಕಾರಣ ವೇನೆಂಬುದು ತಮಗೆ ಏನೂ ತಿಳಿಯುವದಿಲ್ಲ, ಮಹಾ ಸ್ವಾಮಿಗೇ ಗೊತ್ತು" ಎಂದು ಅಂದರು. ಹಾಗಾದರೆ ಶ್ರೀ ಗುರುಗಳ ಕಡೆಗೆನೇ ಹೋಗಿ ಅವರನ್ನು ಪ್ರಾರ್ಥಿಸಿಕೊಳ್ಳಿರಿ ಎಂತ ಸಣ್ಣ ಗುರುಗಳ ಅಪ್ಪಣೆ ಆಯಿತು. ಆಗ ಸಮಸ್ತ ಜನರು ಶ್ರೀ ಗುರುಗಳು ಇದ್ದಲ್ಲಿ ಹೋಗಿ ನಡೆದ ಸಂಗತಿಯನ್ನು ಸವಿಸ್ತರವಾಗಿ ಹೇಳಿಕೊಂಡರು. ಅದಕ್ಕೆ ಶ್ರೀ ಗುರುಗಳು— "ಕಾವಲಗಿ ಕೆಳಗೆ ಉರಿ ಮಾಡಿ ಉಪಯೋಗವೇನು? ನಮ್ಮ ಹೊಟ್ಟೆಯಲ್ಲಿಯೇ ಉರಿ ಬಿದ್ದಿರುವಾಗ ವಡೆಗಳಿಗೆ ಉರಿ ಹೇಗೆ ಮುಟ್ಟಬೇಕು?" ಅಂದರು. ಆಗ ಜನರಿಗೆಲ್ಲ ಶ್ರೀ ಗುರುಗಳಿಗೆ ಈ ಹೊತ್ತು ಗಂಜಿ ಊಟವನ್ನು ಮಾಡಗೊಡಲಿಲ್ಲಾದರ ಪರಿಣಾಮವೇ ಇದು ಎಂದು ಖಾತ್ರಿಯಾಗಿ ತಿಳಿದು ಕೊಂಡು ಸಮಸ್ತರು ಶ್ರೀ ಗುರುಗಳ ಪಾದಂಗಳಿಗೆ ಸಾಷ್ಟಾಂಗವೆರಗಿ ಅಜ್ಞಾನದಿಂದ ಆದ ತಪ್ಪನ್ನು ಕ್ಷಮಿಸಬೇಕಾಗಿ ಬೇಡಿಕೊಂಡರು. ಮತ್ತು ಕೂಡಲೇ ಗಂಜಿ ತಯಾರು ಮಾಡಿಸಿ ಗುರುಗಳನ್ನು ಮೊದಲು ಗಂಜಿ ಬಡಿಸಿ ಅವರನ್ನು ತೃಪ್ತಿ ಪಡಿಸಿದರು. ಆ ಮೇಲೆ ವಡೆಗಳು ಸರಿಯಾಗಿ ಸುಟ್ಟು ಬಂದವು.

ಈ ಗುರುವಿನಲ್ಲಿ ವಿಶ್ವಾಸ ಇಟ್ಟವರು ಈಗಲೂ ತಮಗೆ ಕಷ್ಟಕಾಲ ಬಂದಾಗ ಈ ಗುರುಸ್ವಾಮಿಗೆ ಗಂಜಿ ಊಟದಲ್ಲಿ ಪ್ರೀತಿ ಇದ್ದ ಕಾರಣ

ಇವರ ಸಮಾಧಿ ದೇವರಿಗೆ ಗಂಜಿ ನೈವೇದ್ಯ ಮಾಡಿಸುತ್ತೇನೆಂತ ಹರಿಕೆ ಮಾಡಿಕೊಂಡು ಆ ಹರಿಕೆಯನ್ನು ಒಪ್ಪಿಸಿದ ಕೂಡಲೇ ಅವರ ಕಷ್ಟ ಪರಿಹಾರವಾಗುತ್ತದೆ.

(೩) ನರ್ಸೋಬಾವಾಡಿಯಲ್ಲಿರುವ ಶ್ರೀಪಾದ ಶ್ರೀ ವಲ್ಲಭ ದೇವರ ಅರ್ಚಕನು ಹಾಗೂ ಅವನ ಮಗನು ಒಮ್ಮೆ ಬೇನೆಯಲ್ಲಿ ಬಿದ್ದಿದ್ದರು. ಮಗನ ಬೇನೆಯು ಹೆಚ್ಚುತ್ತ ಹೋಯಿತು. ಆಗ ತಂದೆಗೆ ಒಂದುರಾತ್ರಿ ಸ್ವಪ್ನದಲ್ಲಿ ಶ್ರೀಪಾದ ಶ್ರೀ ವಲ್ಲಭ ದೇವರೇ ಕಾಣಿಸಿಕೊಂಡು— "ನೀನು ನಿನ್ನ ಮಗನಿಗೆ ಕರಕೊಂಡು ಮಲ್ಲಾಪುರ ಮಠದಲ್ಲಿದ್ದ ಶ್ರೀ ಗುರು ಸಮಾಧಿಯ ಸೇವೆಯನ್ನು ಮಾಡು, ಅಂದರೆ ನಿಮ್ಮ ಆಲಸ್ಯವು ಗುಣ ಹೊಂದುವದು" ಎಂದು ಹೇಳಿದರಂತೆ. ಮರುದಿವಸವೇ ಅವನು ಮಗ ನನ್ನು ಕರೆದುಕೊಂಡು ಮಲ್ಲಾಪುರಕ್ಕೆ ಹೋಗಿ ಅಲ್ಲಿಯ ಗುರುಸಮಾಧಿಗೆ ಪ್ರಾರ್ಥಿಸಿ ಅಲ್ಲಿಯೇ ದೇವರ ಭಕ್ತಿ ಮಾಡುತ್ತ ಉಳಿದನು. ಕೆಲವು ದಿವಸ ಗಳಲ್ಲಿಯೇ ಇಬ್ಬರೂ ಪೂರ್ಣ ಗುಣಹೊಂದಿ ತಮ್ಮ ಊರಿಗೆ ಹೋದರು.

(೪) ಎಂಟನೇ ಗುರು ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳು ಮಲ್ಲಾಪುರ ಮಠಕ್ಕೆ ಒಮ್ಮೆ ಬಂದಾಗ ಅಲ್ಲಿರುವ ದೊಡ್ಡ ಗಂಟೆಯ ನಾದವು ಉತ್ಕೃಷ್ಟವಾಗಿ ಬರುತ್ತಿರುವ ಕಾರಣ ಅದನ್ನು ತಮ್ಮ ಚಿತ್ರಾಪುರ ಮಠಕ್ಕೆ ಒಯ್ಯಬೇಕೆಂಬ ಮನಸ್ಸಾಗಿ ಅದನ್ನು ಒಯ್ಯುವ ಸಿದ್ಧತೆ ಮಾಡಿದ್ದರು. ಅದೇ ದಿವಸ ರಾತ್ರಿ ಅವರಿಗೆ ಈ ಮಲ್ಲಾಪುರ ಮಠದ ಸಮಾಧಿಸ್ಥ ಗುರುಗಳಾದ ಶ್ರೀ ಶಂಕರಾಶ್ರಮ ಸ್ವಾಮಿಗಳು ಸ್ವಪ್ನದಲ್ಲಿ ಕಾಣಿಸಿಕೊಂಡು— "ಆ ಘಂಟೆಯನ್ನು ಚಿತ್ರಾಪುರಕ್ಕೆ ಒಯ್ಯಬೇಡ, ಈ ಮಠದಲ್ಲಿಯೇ ಇರಲಿ, ಚಿತ್ರಾಪುರ ಮಠದಲ್ಲಿ ಅಂಥಾ ಘಂಟೆ ಬೇಕಾಗಿದ್ದರೆ ಅಂಥಾದ್ದೇ ಘಂಟೆಯನ್ನು ಮಾಡಿಕೊಡುವಂಥಾ ಒಬ್ಬ ಕಂಚುಗಾರನು ಕುಮಟೆಯಲ್ಲಿ ಇದ್ದಾನೆ. ಅವನ ಕಡೆಯಿಂದ ಮಾಡಿಸಿಕೋ" ಎಂದು ಅಪ್ಪಣೆ ಮಾಡಿದರಂತೆ. ಆ ಪ್ರಕಾರ ಪಾಂಡುರಂಗಾಶ್ರಮ ಸ್ವಾಮಿಗಳು ಅದನ್ನು ಒಯ್ಯುವದನ್ನು ಬಿಟ್ಟು ಕುಮಟೆಯಲ್ಲಿ ಅಂಥಾದ್ದೇ ಘಂಟೆ ಮಾಡಿಸಿ ಚಿತ್ರಾಪುರಕ್ಕೆ ಒಯ್ದರು.

ಈ ಗುರುಗಳು ಮುಕ್ತರಾದದ್ದು ವಿಶ್ವಾವಸು ಸಂವತ್ಸರದ ಮಾಘ ಶುದ್ಧ ೩ ದಿವಸ (೧೭೮೫ ನೇ ಇಸ್ವಿ) ಆಗಿರುತ್ತದೆ. ಇವರ ಸಮಾಧಿಯೇ

ಮಲ್ಲಾಪುರ ಮಠವಾಗಿರುತ್ತದೆ. ಇವರ ಸಮಾಧಿ ಮಠವನ್ನು ಸನ್ ೧೯೧೪ರಲ್ಲಿ ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳು ಹೊಸದಾಗಿ ಕಟ್ಟಿಸಿ ಪ್ರತಿಷ್ಠೆ ಮಾಡಿಸಿದರು. ಸಮಾಧಿ ಆಗಿದ ಸ್ಥಳದಲ್ಲಿ ತುಲಸಿ ಹಾಗೂ ಬಿಲ್ವ ಪತ್ರಗಳು ತಾಜಾ ಇದ್ದದ್ದು ಕಂಡಿತು. ಇದೊಂದು ಚಮತ್ಕಾರವೇ ಸರಿ.

—— ೧೭ ——

## ಅಧ್ಯಾಯ ೫

## ೫ನೇ ಗುರುಗಳು — ಶ್ರೀ ಕೇಶವಾಶ್ರಮ ಸ್ವಾಮಿಗಳು

ಇವರ ಆಳ್ವಿಕೆಯು ಸನ್ ೧೭೮೫ ರಿಂದ ೧೮೨೩ ಆಗಿರುತ್ತದೆ. ಇವರ ಕಾಲದಲ್ಲಿ ಮಠವು ಸ್ವಲ್ಪ ಊರ್ಜಿತ ಸ್ಥಿತಿಗೆ ಬಂತು. ಭಕ್ತ ವೃಂದದಲ್ಲಿ ವಿಶೇಷ ರೀತಿಯಿಂದ ಭಕ್ತಿ ಉತ್ಪನ್ನವಾಗಿ ಅವರ ಕಡೆಯಿಂದ ವರ್ಷಾಸನ ವಂತಿಗೆಯು ಕ್ರಮವಾಗಿ ಬರಲಿಕ್ಕೆ ಪ್ರಾರಂಭವಾಯಿತು. ಮಠಕ್ಕೆ ಕೆಲವು ಜಮೀನುಗಳು ಕೊಂಡುಕೊಳ್ಳಲ್ಪಟ್ಟವು. ಈ ರೀತಿಯಾಗಿ ಮಠದ ಉತ್ಪನ್ನವು ಸ್ವಲ್ಪ ಮಟ್ಟಿಗೆ ಬೆಳೆಯಿತು. ಇವರು ಸಮಯ ಸಿಕ್ಕಿದಾಗ್ಯೆ ಮಠದ ಜಮಾ ಖರ್ಚು ಹಾಗೂ ಲೆಖ್ಖಪತ್ರದಲ್ಲಿ ಮನಸ್ಸು ಹಾಕುತ್ತಿದ್ದರು. ಇವರ ಕಾಲಕ್ಕೆ ಕೊಪ್ಪಿ ನಾರ್ಣಪ್ಪಯ್ಯನೆಂಬವರು ಮಠದ ಪಾರುಪತ್ಯಗಾರರಾಗಿದ್ದರು. ಈ ಗುರುಗಳು ಒಮ್ಮೆ ಕಾಶೀ ಪರಿಯಂತರ ಯಾತ್ರೆ ಮಾಡಿಕೊಂಡು ಬಂದಿರುವರು. ಇವರು ದಕ್ಷಿಣ ಕಾನಾಡಾದಲ್ಲಿರುವ ನಮ್ಮ ಜನರು ಇರುವ ಪ್ರದೇಶಗಳಲ್ಲಿ ಮೇಲಿಂದ ಮೇಲೆ ಸಂಚಾರ ಮಾಡುತ್ತಾ ಇದ್ದರು. ಇವರು ಚಿತ್ರಾಪುರ ಮಠದ ಸಮೀಪ ತಲಗೇರಿಯಲ್ಲಿ ಒಂದು ವಿಶ್ರಾಂತಿ ಮನೆಯನ್ನು (ಮಠದ ಮನೆ) ಕಟ್ಟಿಸಿ ಬೇಸಿಗೆಯ ಕಾಲದಲ್ಲಿ ಅಲ್ಲಿ ಹೋಗಿ ವಿಶ್ರಾಂತಿ ತಕ್ಕೊಳ್ಳುತ್ತಿದ್ದರು. ಇವರಿಗೆ ವೃದ್ಧಾಪ್ಯಕಾಲ ಬಂದ ಕೂಡಲೇ ಶಿಷ್ಯಸ್ವೀಕಾರ ಮಾಡುವ ಅವಶ್ಯ ತೋರಿ ಶುಕ್ಲ ಭಟ್ಟರ ಕುಟುಂಬದಲ್ಲಿ ಈ ಸಾರೆ ಒಬ್ಬ ಯೋಗ್ಯ ಹುಡುಗನು ದೊರೆತಿದ್ದರಿಂದ ಅವನನ್ನು ತಂದು ರಕ್ತಾಕ್ಷಿ ಸಂವತ್ಸರದ ಆಷಾಢ ಶುದ್ಧ ೫ ದಿವಸ

(೧೮೦೪ ರಲ್ಲಿ) ಅವರನ್ನು **ಶ್ರೀ ವಾಮನಾಶ್ರಮ** ಎಂಬ ಅಭಿಧಾನದಿಂದ ಮಂಗಳೂರಲ್ಲಿ ಶಿಷ್ಯನಾಗಿ ಮಾಡಿಕೊಂಡರು. ಈ ಕೇಶವಾಶ್ರಮ ಸ್ವಾಮಿಗಳು ಮುಕ್ತರಾದದ್ದು ಸುಭಾನು ಸಂವತ್ಸರದ ಮಾರ್ಗಶಿರ ಬ| ೯ ದಿವಸ (೧೮೨೩ ನೇ ಇಸ್ವಿ) ಆಗಿರುತ್ತದೆ. ಇವರ ಸಮಾಧಿಯು ಚಿತ್ರಾಪುರ ಮಠದ ಬಲಬದಿಯ ಸಮಾಧಿಗಳಲ್ಲಿ ೨ ನೇದಾಗಿರುತ್ತದೆ.

---

## ಅಧ್ಯಾಯ ೬

## ೬ನೇ ಗುರುಗಳು—ಶ್ರೀ ವಾಮನಾಶ್ರಮ ಸ್ವಾಮಿಗಳು

ಇವರ ಆಳ್ವಿಕೆಯು ಸನ್ ೧೮೨೩ ರಿಂದ ೧೮೩೯ ಆಗಿರುತ್ತದೆ. ಇವರ ಕಾಲದಲ್ಲಿಯೂ ಕೊಪ್ಪಿ ನಾರ್ಣಪ್ಪಯ್ಯನವರೇ ಮಠದ ಪಾರುಪತ್ಯಗಾರರಾಗಿದ್ದರು ಈ ಗುರುಗಳು ಬಹಳ ಸರಳ ಹಾಗೂ ಶಾಂತ ಸ್ವಭಾವದವರು. ಇವರು ಮಠದ ಆಡಳಿತೆಯಲ್ಲಿ ಮನಸ್ಸು ಕೊಡುತ್ತಿದ್ದಿಲ್ಲ. ಮಠದ ಎಲ್ಲ ಆಡಳಿತೆಯನ್ನು ಮಣೆಗಾರರ ಮೇಲೆಯೇ ಒಪ್ಪಿಸಿದ್ದರು. ಮಣೆಗಾರರು ಶುಕ್ಲ ಭಟ್ಟರ ಮನೆತನದವರೇ ಆಗಿದ್ದರು. ಮಠದ ಖರ್ಚು ವಿಶೇಷ ಆಗಲಿಕ್ಕೆ ಹತ್ತಿತು. ಇದರಿಂದ ಮಣೆಗಾರರಲ್ಲಿ ಹಾಗೂ ಭಕ್ತವೃಂದದಲ್ಲಿ ವೈಮನಸ್ಸುಂಟಾಗಿ ಜನರು ಮಣೆಗಾರರಿಗೆ ಮಠದ ಜಮಾಖರ್ಚಿನ ಲೆಖ್ಖ ತೋರಿಸಲಿಕ್ಕೆ ಹೇಳಿದರು. ಅದಕ್ಕೆ ಮಣೆಗಾರರು ಒಪ್ಪಲಿಲ್ಲ. ಆದ್ದರಿಂದ ಜನರು ಈ ಗುರುಗಳು ಮಠದ ಆಡಳಿತೆ ಕಡೆಗೆ ಸರಿಯಾಗಿ ಲಕ್ಷ್ಯಕೊಡುವದಿಲ್ಲೆಂದು ಬೇರೊಬ್ಬರನ್ನು ಶಿಷ್ಯಸ್ವೀಕಾರಮಾಡಿಸಿ ಅವರಿಂದಲಾದರೂ ಈ ಆಡಳಿತೆ ಕಡೆಗೆ ಲಕ್ಷ್ಯಕೊಡಿಸಬೇಕೆಂದು ಶಿಷ್ಯಸ್ವೀಕಾರಕ್ಕೆ ಗುರುಗಳಿಗೆ ಆಗ್ರಹಪಡಿಸಿದರು. ಶಿಷ್ಯಸ್ವಾಮಿಯನ್ನು ಆರಿಸಿದ ಕಥೆಯು ಚಮತ್ಕಾರದ್ದು ಇರುತ್ತದೆ. ಮಂಗಳೂರು ಜಿಲ್ಲೆಯ ಕಲೆಕ್ಟರರ ಕರ್ಣಿಕರು (ದಪ್ತರದಾರ, ಈಗ ಚಿಟನೀಸ ಅನ್ನುತ್ತಾರೆ) ದೇವಪ್ಪಯ್ಯ ಎಂಬವರು ಇದ್ದರು. ಇವರಲ್ಲಿ ನಗರ ಕುಟುಂಬದ ಪರಮೇಶ್ವರನೆಂಬ ಹೆಸರಿನ ಬಡ ಹುಡುಗನು ಚಾಕರಿಗೆ ಇದ್ದನು. ಒಂದು ದಿವಸ ಒಬ್ಬ ಕಣಿಯಾರನು

(ಮಲಬಾರದ ಪ್ರಖ್ಯಾತ ಜ್ಯೋತಿಷಿ) ಈ ದೇವಪ್ಪಯ್ಯನವರಲ್ಲಿ ಬಂದಿದ್ದನು. ಆಗ ದೇವಪ್ಪಯ್ಯನವರು ಆ ಹುಡುಗನ (ಪರಮೇಶ್ವರ) ಕಡೆಯಿಂದ ತಮ್ಮ ಕಾಲುಗಳನ್ನು ಮರ್ದಿಸಿಕೊಳ್ಳುತ್ತಿದ್ದರು. ಇದನ್ನು ಆ ಕಣಿಯಾರನು ನೋಡಿ ಆ ಹುಡುಗನನ್ನು ಚೆನ್ನಾಗಿ ದಿಟ್ಟಿಸಿ ನೋಡಲು ಅವನಲ್ಲಿರುವ ರಾಜ ಚಿನ್ಹೆಗಳು ಅವನ ದೃಷ್ಟಿಗೆ ಬಿದ್ದವು. ಆಗ ಅವನು ದೇವಪ್ಪಯ್ಯನವರಿಗೆ ಈ ಹುಡುಗನ ಕಡೆಯಿಂದ ಇನ್ನು ಮೇಲೆ ಇಂಥ ಕೀಳು ಸೇವೆ ಸ್ವೀಕರಿಸ ಬಾರದೆಂತಲೂ ಅವನನ್ನು ಮರ್ಯಾದೆ ಕೊಟ್ಟು ನಡಿಸಬೇಕಾಗಿಯೂ ಹೇಳಿದನು. ಅದರಂತೆ ಅವರು ಅಂದಿನಿಂದ ಆ ಹುಡುಗನಿಗೆ ಮರ್ಯಾದೆ ಯಿಂದ ನಡೆಸುತ್ತಿದ್ದರು. ಇದಾದ ಕೆಲವು ದಿವಸಗಳ ಮೇಲೆಯೇ ಇನ್ನೊಂದು ಸಂಗತಿ ಘಟಿಸಿತು. ಈ ವಾಮನಾಶ್ರಮ ಗುರುಗಳು ವಿಠ್ಠಲ ಎಂಬ ಊರಿಗೆ ಸಂಚಾರಕ್ಕೆ ಹೋದಾಗ್ಯೆ ಅಲ್ಲಿಯ ಅನಂತೇಶ್ವರ ದೇವಸ್ಥಾನ ದಲ್ಲಿ ಇಳಿದಿದ್ದರು. ಗುರುಗಳ ಪರಿವಾರದ ಸಂಗಡ ಆ ಪರಮೇಶ್ವರ ಹುಡುಗನೂ ಇದ್ದನು. ಆ ದೇವಸ್ಥಾನದ ಭಕ್ತವತ್ಸಲ ಪೂಜಾರಿಯು ಆ ಹುಡುಗನ ಲಕ್ಷಣವನ್ನು ನೋಡಿ ಅವನ ಮುಖಮುದ್ರೆಯ ಮೇಲಿಂದ ಈ ಹುಡುಗನು ನಮ್ಮ ಮುಂದಿನ ಸ್ವಾಮಿ ಆಗಬಹುದು ಎಂದು ಭವಿಷ್ಯವನ್ನು ಹೇಳಿದನು. ಈ ಸುದ್ದಿಯು ಎಲ್ಲ ಕಡೆಗೂ ಹರಡಿತು. ಮೇಲಿನ ಎರಡು ಕಾರಣಗಳಿಂದ ಆ ಹುಡುಗನ ಯೋಗ್ಯತೆ ಉತ್ಕೃಷ್ಟ ಇರಲಿಕ್ಕೇ ಬೇಕು ಎಂದು ಜನರು ನಿಶ್ಚಯಿಸಿ, ಆ ಹುಡುಗನನ್ನು ಕರೆಸಿ ಅವನನ್ನು ಶಿಷ್ಯ ಸ್ವೀಕಾರ ಮಾಡಿಕೊಳ್ಳಬೇಕಾಗಿ ಸ್ವಾಮಿಗಳಿಗೆ ಅರುಹಿದರು. ಅದರಂತೆ ಅವನಿಗೆ ಶ್ರೀ ಕೃಷ್ಣಾಶ್ರಮಸ್ವಾಮಿ ಎಂಬ ಅಭಿಧಾನ ಕೊಟ್ಟು ಮನ್ಮಥ ಸಂವತ್ಸರದ ಫಾಲ್ಗುಣ ಬ. ೧೦ನೇ ದಿವಸ (೧೮೩೫ ರಲ್ಲಿ), ಶಿಷ್ಯ ಸ್ವೀಕಾರ ವಾಯಿತು. ಇದಾದ ಕೆಲವು ದಿವಸಗಳ ತರುವಾಯ ನಮ್ಮ ಜನರು, ಶ್ರೀ ಗುರುಗಳು ಮಠದ ಆಧಿಪತ್ಯವನ್ನು ಶಿಷ್ಯರ ವಶ ಬಿಟ್ಟುಕೊಟ್ಟರೆ ಅವರಿಗೆ ಅದರ ಅನುಭವ ಆಗಿ ಆಡಳಿತೆಯು ಮುಂದೆ ಸುರಳೀತ ಸಾಗಬಹು ದಾಗಿ ಗುರುಗಳಿಗೆ ಸೂಚಿಸಿದರು. ಈ ಸೂಚನೆಯು ಶ್ರೀ ಗುರುಗಳಿಗೆ ಮೆಚ್ಚಲಿಲ್ಲ. ಅವರು ಅದನ್ನು ಮನಸ್ಸಿಗೆ ಹಚ್ಚಿಕೊಂಡು ತಮ್ಮ ಪೆಟ್ಟಿಗೆಯ ಕೀಲಿಕೈಯನ್ನು ಒತ್ತಟ್ಟಿಗೆ ಬಿಸಾಡಿ ದೀರ್ಘಸ್ವರದಿಂದ ಮಹಾದೇವಿಯ ಪ್ರಾರ್ಥನೆ ಮಾಡಿದರು—"ಮಹಾದೇವಿ, ನನ್ನನ್ನು ಲಕ್ಷ್ಯೀಕರಿಸು. ಇಲ್ಲಿ ಈಗ ಬದುಕಿ ಉಳಿಯುವ ಉಪಯೋಗವಿಲ್ಲ" ಎಂದು ಅಂದರು. ಹೀಗೆ

ಅಂದ ಸ್ವಲ್ಪ ದಿವಸಗಳಲ್ಲಿಯೇ ಶ್ರೀ ಗುರುಗಳಿಗೆ ಮೈಲಿಗೆ ಜ್ವರ ಬಂದು ಅದರಲ್ಲಿಯೇ ಅವರು ಮುಕ್ತರಾದರು. ಮುಕ್ತರಾದ ದಿವಸವು ವಿಕಾರಿ ಸಂವತ್ಸರದ ಕಾರ್ತಿಕ ಬ. ೯ (೧೮೫೯ನೇ ಇಸ್ವಿ) ಆಗಿರುತ್ತದೆ. ಈ ವಿಷಯದಲ್ಲಿ ಇನ್ನೊಂದು ಚಮತ್ಕಾರವೇನೆಂದರೆ— ಆ ವೇಳೆಯಲ್ಲಿ ಆ ಊರಲ್ಲಿ ಅಥವಾ ಅದರ ಸಮೀಪದ ಹಳ್ಳಿಗಳಲ್ಲಿ ಮೈಲಿಗೆ ಬೇನೆ ಎಂಬದು ಏನೂ ಇದ್ದಿಲ್ಲ. ಆ ಮೇಲೆ ಕೂಡಾ ಮೈಲಿ ಉಪದ್ರವವು ಎಲ್ಲಿಯೂ ಆಗಲಿಲ್ಲ. ಶ್ರೀ ಗುರುಗಳಿಗೆ ಮಾತ್ರ ಅವರ ಪ್ರಾರ್ಥನೆಯಂತೆ ಅದು ಬಂದಿತ್ತು. ಈ ಗುರುಗಳ ಸಮಾಧಿಯು ಮಂಗಳೂರು ಮಠದಲ್ಲಿರುತ್ತದೆ. ಇವರಿಗೆ ಸಮಾಧಿಯನ್ನು ಕೊಡುವಾಗ ಜನರು ಪ್ರಾಯಶ್ಚಿತ್ತದ ರೀತಿಯಲ್ಲಿ ಸಮಾಧಿಯ ಮೇಲೆ ತೆಂಗಿನ ಶಿಯಾಳದ ನೀರನ್ನು ಸುರಿಸಿ ವಿಶೇಷವಾದ ಪ್ರಾರ್ಥನೆ ಮಾಡಿಕೊಂಡರು. ಈ ಹೊತ್ತಿಗೂ ಭಕ್ತ ಜನರು ವಿಶೇಷ ಕಾರ್ಯಗಳಲ್ಲಿ ಆ ಸಮಾಧಿ ಮೇಲೆ ಶಿಯಾಳ ನೀರಿನ ಅಭಿಷೇಕ ಮಾಡುವ ಸಾಂಪ್ರದಾಯ ಇರುತ್ತದೆ.

ಈ ಗುರುಗಳಲ್ಲಿ ನಮ್ಮ ಜನರ ಭಕ್ತಿ ಬಹಳ ಇರುತ್ತದೆ. ಯಾರಿಗಾದರೂ ಏನಾದರೂ ಆಪತ್ತು ಬಂದಾಗ ಅವರು ಈ ಸಮಾಧಿಯಲ್ಲಿ ನಂದಾದೀಪ ಇಡುತ್ತೇನೆಂತ ಹರಿಕೆ ಹೇಳಿಕೊಂಡರೆ ಅವರ ಆಪತ್ತು ಕೂಡಲೆ ಪರಿಹಾರವಾಗುತ್ತದೆ. ಈ ಗುರುಗಳಲ್ಲಿ ವಿಶ್ವಾಸ ಇಟ್ಟು ಕಷ್ಟ ಪರಿಹಾರ ಮಾಡಿಕೊಂಡ ಒಂದು ಮಹತ್ವದ ದೃಷ್ಟಾಂತ ಅದೆ. ಅದು ಯಾವುದೆಂದರೆ:

ಲಾಭಾದಾಯ ರಾಮರಾಯರೆಂಬವರು ಬಂಟವಾಳದ ಸಬ್ ರಿಜಿಸ್ಟ್ರಾರರಾಗಿದ್ದರು. ಅವರ ಕಡೆಗೆ ಒಬ್ಬ ಹವೀಕ ಬ್ರಾಹ್ಮಣನು ಕಲ್ಲೆ ಮಂಜುನಾಥಯ್ಯನವರಿಗೆ ಬರಕೊಟ್ಟ ಒಂದು ದಸ್ತಾವೇಜು ರಿಜಿಸ್ಟ್ರಿಗೆ ಬಂದಿತ್ತು. ರಾಮರಾಯರು ಕಾಯ್ದೆ ಪ್ರಕಾರ ಚವಕಶಿ ಮಾಡತಕ್ಕದ್ದೆಲ್ಲ ಮಾಡಿ ಅದನ್ನು ರಿಜಿಸ್ಟ್ರಿ ಮಾಡಿದರು. ಆದರೆ ಅದು ಸುಳ್ಳು ದಸ್ತಾವೇಜು ಎಂತ ಗೊತ್ತಿದ್ದು ಅದನ್ನು ಸಬ್‌ರಿಜಿಸ್ಟ್ರಾರರು ರಿಜಿಸ್ಟ್ರಿ ಮಾಡಿದ್ದಾರೆಂದು ಆ ಹವೀಕನ ಹೆಂಡತಿಯು ಆ ಸಬ್‌ರಿಜಿಸ್ಟ್ರಾರರ ಮೇಲೂ, ಕಲ್ಲೆ ಮಂಜುನಾಥಯ್ಯನವರ ಮೇಲೂ, ಡಿಸ್ಟ್ರಿಕ್ಟ್ ಮೆಜಿಸ್ಟ್ರೇಟರಲ್ಲಿ ಫಿರ್ಯಾದಿ ಮಾಡಿದಳು. ಡಿಸ್ಟ್ರಿಕ್ಟ್ ಮೆಜಿಸ್ಟ್ರೇಟರು ಫಿರ್ಯಾದಿಯ ಆರಂಭದ ಚವಕಶಿ ಮಾಡಿ ಖಟ್ಲೆಯನ್ನು ಸೆಶ್ಶನ್ ಕೋರ್ಟಿಗೆ ರವಾನಿಸಿದರು. ಆರೋಪಿಗಳಿಗೆ

ಮರ್ಯಾದಸ್ಥ ಶ್ರೀಮಂತ ವಕೀಲರು ಜಾಮೀನ ಕೊಡಲಿಕ್ಕೆ ಸಿದ್ಧರಾಗಿ ಬಂದರೂ ಡಿಸ್ಟ್ರಿಕ್ಟ್ ಮೆಜಿಸ್ಟ್ರೇಟರಾಗಲೀ, ಡಿಸ್ಟ್ರಿಕ್ಟ್ ಜಜ್ಜರಾಗಲೀ, ಅವರನ್ನು ಜಾಮೀನಿನ ಮೇಲೆ ಬಿಡಲಿಲ್ಲ. ಅವರು ಅಷ್ಟು ದೊಡ್ಡ ಗುನ್ಹೆಗಾರರೆಂದು ಜಜ್ಜರು ತಿಳಕೊಂಡಿದ್ದರು. ಈ ಸಂಬಂಧ ನಮ್ಮ ಜನರಲ್ಲಿ ಬಹಳ ಚಳವಳಿ ಉಂಟಾಯಿತು. ಅವರು ಶ್ರೀ ಭವಾನೀಶಂಕರ ದೇವರಲ್ಲಿ ಪ್ರಾರ್ಥನೆಮಾಡಿಕೊಂಡರು. ಶ್ರೀ ವಾಮನಾಶ್ರಮ ಗುರುಗಳ ಸಮಾಧಿಯಲ್ಲಿಯೂ ವಿಶೇಷವಾದ ಸೇವೆಗಳು ಮಾಡಲ್ಪಟ್ಟವು. ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳು ಆ ಸಮಯದಲ್ಲಿ ಅಲ್ಲಿಯೇ ಇದ್ದರು. ಇವರು ಕೂಡ ಆರೋಪಿಗಳ ಬಿಡುಗಡೆ ಕುರಿತು ಪ್ರತಿದಿನವೆಂಬಂತೆ ದೇವರ ಹತ್ತಿರ ಪ್ರಾರ್ಥನೆ ಮಾಡುತ್ತಿದ್ದರು. ಈ ಎಲ್ಲದರ ಪರಿಣಾಮವಾಗಿ ಎಂಬಂತೆ ಆರೋಪಿಗಳು ತಮ್ಮನ್ನು ಜಾಮೀನಿನ ಮೇಲೆ ಬಿಡಬೇಕಾಗಿ ಹ್ಯಾಕೋರ್ಟಿಗೆ ಆಪೀಲು ಮಾಡಿದ್ದಕ್ಕೆ ಅವರನ್ನು ಜಾಮೀನಿನ ಮೇಲೆ ಬಿಡಲಿಕ್ಕೆ ಅಡ್ಡಿಯಿಲ್ಲ ವಾಗಿ ಹ್ಯಾಕೋರ್ಟಿನಿಂದ ಹುಕುಂ ಬಂತು. ಹಾಗೂ ಡಿಸ್ಟ್ರಿಕ್ಟ್ ಜಜ್ಜರು ಖಟ್ಲೆಯ ಅರ್ಧ ವಿಚಾರಮಾಡಿ ಆರೋಪಿಗಳ ಮೇಲೆ ಗುನ್ಹೆಯನ್ನು ಸ್ಥಾಪಿಸುವಂತೆ ಕಾಣಹತ್ತಿದ್ದ ಸಮಯದಲ್ಲಿ ಹ್ಯಾಕೋರ್ಟಿನಿಂದ ಜಜ್ಜ ಸಾಹೇಬರಿಗೆ ಕನ್ನಾನೂರಿಗೆ ವರ್ಗವಾದ ಹುಕುಂ ಅಕಸ್ಮಿತವಾಗಿ ಅವರಿಗೆ ತಾರಿನಮೇಲೆ ಬಂತು. ಡಿಸ್ಟ್ರಿಕ್ಟ್ ಜಜ್ಜರು ಆ ಹುಕುಮಿಗೆ— "ಈಗ ತಾನು ಮಹತ್ವದ ಖಟ್ಲೆಯ ವಿಚಾರ ಮಾಡಲಿಕ್ಕೆ ತೊಡಗಿದ್ದೇನೆ ಅದನ್ನು ಪೂರ್ಣ ವಿಚಾರಮಾಡಿ ಆ ಮೇಲೆ ತಾನು ಕನ್ನಾನೂರಿಗೆ ಹೋಗುತ್ತೇನೆ" ಎಂದು ರಿಪೋರ್ಟು ಮಾಡಿದರು. ಅದನ್ನು ಹ್ಯಾಕೋರ್ಟಿನವರು ಕೇಳದೆ ಕೂಡಲೇ ಹೊರಟು ಹೋಗಲಿಕ್ಕೇ ಬೇಕಾಗಿ ಇನ್ನೊಂದು ಜರೂರಿಯ ತಾರ್ ಮಾಡಿದರು. ಆ ಪ್ರಕಾರ ಅವರು ಖಟ್ಲೆವಿಚಾರವನ್ನು ಹಾಗೆಯೇ ಬಿಟ್ಟು ಕನ್ನಾನೂರಿಗೆ ಹೋದರು. ಹೊಸ ಜಜ್ಜರು ಬಂದು ಆರೋಪಿಗಳ ಅರ್ಜಿಯಂತೆ ಖಟ್ಲೆಯನ್ನು ಹೊಸದಾಗಿ ವಿಚಾರಮಾಡಿ ಆಗ ಕೋರ್ಟಿನಲ್ಲಿ ಹಾಜರಾದ ಪುರಾವೆ ಮೇಲಿಂದ ಆರೋಪಿಗಳು ನಿರ್ದೋಷಿಗಳೆಂದು ಠರಾಯಿಸಿ ಆರೋಪಿಗಳನ್ನು ಗೌರವದಿಂದ ಬಿಟ್ಟುಬಿಟ್ಟರು. ಇದನ್ನು ಆರೋಪಿಗಳು ಹಾಗೂ ನಮ್ಮ ಜನರು ಕೇಳಿ ಹರ್ಷಭರಿತರಾಗಿ ಇದು ಗುರುಗಳ ಮಹಿಮೆಯೇ ಸರಿ ಎಂದು ಕೊಂಡಾಡಿದರು. ಇದರಲ್ಲಿ

ಇನ್ನೊಂದು ಚಮತ್ಕಾರದ ಸಂಗತಿ ಏನೆಂದರೆ— ಆ ವರ್ಗಾವರ್ಗಿಯು ತೀರ ಹಂಗಾಮಿ ಆಗಿತ್ತು. ಹಿಂದಿನ ಜಜ್ಜರು ತಿರಿಗಿ ಇಲ್ಲಿಯೇ ಬಂದರು. ಅವರು ಬರುವಷ್ಟರಲ್ಲಿ ಖಟ್ಲೆ ನಿಕಾಲೆ ಆಗಿಹೋಗಿತ್ತು. ಇವರಿಗೆ ವರ್ಗ ಆದದ್ದು ಹಾಗೂ ಹೊಸ ಜಜ್ಜರು ಬಂದದ್ದು ಮೇಲಿನ ಆರೋಪಿಗಳನ್ನು ಬಿಡುಗಡೆ ಮಾಡುವ ಬಗ್ಗೆನೇ ಆದಂತಾಯಿತು. ಅದಲ್ಲದೆ ಆರೋಪಿಯಾದ ಲಾಭಾಪಾಯ ರಾಮರಾಯರು ಕೆಲಕಾಲದ ಮೇಲೆ ಸಬ್ ರಿಜಿಸ್ಟ್ರಾರೀ ಜಾಗದಿಂದ ಮೇಲಿನ ಜಾಗಕ್ಕೆ ಡಿಸ್ಟ್ರಿಕ್ಟ್ ರಿಜಿಸ್ಟ್ರಾರರಾಗಿ ಮಂಗಳೂರಲ್ಲಿಯೇ ನೇಮಿಸಲ್ಪಟ್ಟರು.

---

## ಅಧ್ಯಾಯ ೭

## ೭ ನೇ ಗುರುಗಳು—ಶ್ರೀ ಕೃಷ್ಣಾಶ್ರಮ ಸ್ವಾಮಿಗಳು

ಇವರ ಆಳ್ವಿಕೆಯು ಸನ್ ೧೮೩೯ ರಿಂದ ೧೮೬೩ ಆಗಿರುತ್ತದೆ. ಇವರ ಮಠದ ಕೆಲಸಗಳು ಜಾಣರಾದ ಪಾರುಪತ್ಯಗಾರ ಲಾಜ್ಮಿ ವೆಂಕಟರಮಣಯ್ಯನವರ ಸಹಾಯದಿಂದ ಯೋಗ್ಯ ರೀತಿಯಿಂದ ಸರಿಪಡಿಸಲ್ಪಟ್ಟವು. ಹೊಸದಾಗಿ ಜಮೀನುಗಳು ಕೊಂಡುಕೊಳ್ಳಲ್ಪಟ್ಟವು. ಶ್ರೀ ಭವಾನೀಶಂಕರ ದೇವರಿಗೆ ಚಿನ್ನದ ಅಲಂಕಾರಗಳು ಮಾಡಲ್ಪಟ್ಟವು. ಮಠದ ಆಡಳಿತೆಯಲ್ಲಿ ಬಹಳ ಸುಧಾರಣೆಗಳು ಆದವು. ಚಿತ್ರಾಪುರದಲ್ಲಿ ರಥೋತ್ಸಹವು ಪ್ರಾರಂಭವಾದದ್ದು ಇವರ ಕಾಲದಲ್ಲಿಯೇ. ಮಠದ ಆಡಳಿತೆಯಲ್ಲಿ ಇವರು ನಿಷ್ಣಾತರೂ ಹಾಗೂ ಮಿತವ್ಯಯಿಗಳೂ ಆಗಿದ್ದರು. ಪ್ರತಿ ಒಂದು ಕೆಲಸವನ್ನು ಬಹಳ ವಿಚಾರದಿಂದ ಮಾಡುವರು. ಹೀಗೆ ಮಾಡಿ ಮಠವನ್ನು ಮೊದಲಿಗಿಂತ ಹೆಚ್ಚು ಊರ್ಜಿತ ಸ್ಥಿತಿಗೆ ತಂದರು. ಮೂಲ್ಕಿ ಎಂಬ ಊರಲ್ಲಿ ಶ್ರೀ ಉಮಾಮಹೇಶ್ವರ ದೇವಸ್ಥಾನದ ಅಡಿಗಲ್ಲು ಹಾಕಿ ಅದರ ಪ್ರತಿಷ್ಠೆ ಆದದ್ದು ಇವರ ಕೈಯಿಂದಲೇ ಆಗಿರುತ್ತದೆ. ಇವರು ಸಂಸ್ಕೃತದಲ್ಲಿ ಘನ ಪಂಡಿತರು. ಇವರಿಗೆ ವೃದ್ಧಾಪ್ಯಕಾಲ ಬಂದ ಕೂಡಲೆ ಇವರು ನಗರ ಕುಟುಂಬದಿಂದಲೇ ಕಾಳಪ್ಪನೆಂಬ ಹುಡುಗನನ್ನು (ಅಣ್ಣನ ಮಗ) ತಂದು ಕಾಳಿತಾಕ್ಷಿ ಸಂವತ್ಸರದ

ಮಾಘ ಶು। ೧೫ ದಿವಸ (೧೮೫೮ನೇ ಇಸ್ವಿ) **ಶ್ರೀ ಪಾಂಡುರಂಗಾಶ್ರಮ** ಎಂಬ ಅಭಿಧಾನ ಕೊಟ್ಟು ಅವನನ್ನು ಶಿಷ್ಯನನ್ನಾಗಿ ಮಾಡಿಕೊಂಡರು. ಇವರು ಮುಕ್ತರಾದದ್ದು ರುಧಿರೋದ್ಗಾರಿ ಸಂವತ್ಸರದ ಮಾರ್ಗಶಿರ ಬ। ೮ (ಸನ್ ೧೮೬೩ರಲ್ಲಿ) ಆಗಿರುತ್ತದೆ. ಇವರ ಸಮಾಧಿಯು ಚಿತ್ರಾಪುರ ಮಠದ ಬಲಬದಿಯ ಸಮಾಧಿಗಳಲ್ಲಿ ಎರಡನೆಯದು (ಅಂದರೆ ೨ನೇ ಪರಿಜ್ಞಾನಾಶ್ರಮ ಸ್ವಾಮಿಗಳ ಮತ್ತು ಕೇಶವಾಶ್ರಮ ಸ್ವಾಮಿಗಳ ಮಧ್ಯದಲ್ಲಿದ್ದದ್ದು) ಆಗಿರುತ್ತದೆ. ಇವರ ಕಾಲದಲ್ಲಿಯೂ ಕೆಲವು ಚಮತ್ಕಾರದ ಸಂಗತಿಗಳು ಜರುಗಿದವು. ಅವುಗಳಲ್ಲಿ ಎರಡನ್ನು ಇಲ್ಲಿ ಕೊಡುತ್ತೇನೆ.

೧. ನಾಗರಕಟ್ಟೆಯ ಪ್ರಸಿದ್ಧ ವಕೀಲ ಶಿವರಾಮಪ್ಪನವರ ಅಜ್ಜ ದುರ್ಗಪ್ಪಾ ನಾಗರಕಟ್ಟೆ ಎಂಬವರಿಗೆ ಈ ಗುರುಗಳು ಒಂದು ದಿವಸ ಶ್ರೀ ಸಪ್ತಶತಿಯ ಪುಸ್ತಕವನ್ನು ಕೊಟ್ಟು ಅವರಿಗೆ ಅದರ ಪಾರಾಯಣವನ್ನು ದಿನನಿತ್ಯವೂ ಮಾಡಿದರೆ ಸುಖ ಸಂಪತ್ತಿನ ಲಾಭ ಆಗುತ್ತದಾಗಿ ಹೇಳಿ ಅದರ ಉಪದೇಶ ಅವರಿಗೆ ಮಾಡಿದರು. ಆ ಪ್ರಕಾರ ಅವರು ನೇಮದಿಂದ ಅದರಂತೆ ಮಾಡಹತ್ತಿದರು. ಅದರ ಪರಿಣಾಮವಾಗಿ ಅವರ ಕಷ್ಟಗಳೆಲ್ಲ ನಿವಾರಣೆಯಾದವು. ಹಾಗೂ ಅವರಿಗೆ ಜನರಲ್ಲಿ ಮಾನ್ಯತೆ, ಮನೆಯಲ್ಲಿ ಸುಖಸಂಪತ್ತು ಸಿಕ್ಕಿ ಪ್ರಖ್ಯಾತ ಹೊಂದಿದರು.

೨. ಕಾರ್ತಿಕ ಶುದ್ಧ ೧೫ ದಿವಸ ಚಿತ್ರಾಪುರ ಮಠದ ಪಾಲಕಿ ಉತ್ಸವವು ವನಭೋಜನಕ್ಕಾಗಿ ಬಹಳ ದೂರ ಹೋಗುತ್ತಿರುತ್ತಿದ್ದು, ಅಲ್ಲಿ ರಾತ್ರೆ ವರೆಗೆ ಇದ್ದು ರಾತ್ರೆ ಆದ ಮೇಲೆ ದೀಪೋತ್ಸವದಿಂದ ಶಿರಾಲಿ ಪೇಟೆಯ ಅಂಗಡಿಗಳ ಮುಂದಿನಿಂದ ಹಾಯ್ದು ಬರುತ್ತದೆ. ಅಲ್ಲಿ ಬಂದ ಕೂಡಲೆ ಪ್ರತಿ ಒಬ್ಬ ಅಂಗಡಿಗಾರನು ತನ್ನ ಅಂಗಡಿ ಮುಂದೆ ಪಾಲಕಿ ಬಂದ ಕೂಡಲೆ ದೇವರಿಗೆ ಹಣ್ಣು ಕಾಯಿ ಆರತಿ ಕೊಟ್ಟು ಪ್ರಸಾದ ಸ್ವೀಕರಿಸುವನು. ಇದು ಅಲ್ಲಿ ವಾಡಿಕೆ ಇದ್ದ ನಿಯಮವು. ಈ ಗುರುಗಳ ಕಾಲದಲ್ಲಿ ಒಂದು ವರ್ಷ ಅಂಗಡಿಗಾರರು ಮಠದ ಮೇಲೆ ಯಾವ ಕಾರಣದಿಂದಲೋ ಸಿಟ್ಟಾಗಿ ವನಭೋಜನದ ದಿವಸ ರಾತ್ರೆ ಮಠದ ಪಾಲಕಿ ಉತ್ಸವವು ತಿರಿಗಿ ಬರುವ ಪೂರ್ವದಲ್ಲಿಯೇ ತಮ್ಮ ತಮ್ಮ ಅಂಗಡಿಗಳನ್ನು ಮುಚ್ಚಿ ಮನೆಗೆ ಹೋಗಿ ಬಿಟ್ಟರು. ವಾಡಿಕೆಯಂತೆ ಪಾಲಕಿಯು ರಾತ್ರೆ ಶಿರಾಲಿ ಪೇಟೆಗೆ ಬಂತು. ಆದರೆ ಅಲ್ಲಿ ಪ್ರತಿ ವರ್ಷದಂತೆ ದೀಪಗಳು ಇರಲಿಲ್ಲ. ಇದು ಶ್ರೀಗಳವರ

1192

ನಜರಿಗೆ ಬಂದು, ಅವರು—"ಒಳ್ಳೇದು, ಪಾಲಕಿಯು ಮಠಕ್ಕೆ ಮುಂದರಿಸಲಿ, —ಶ್ರೀ ಭವಾನಿಶಂಕರ ದೇವರಿಗೆ ದೀವಗಳು ಬೇಕಾಗಿದ್ದರೆ ಅವರಿಗೆ ಸಾಕಷ್ಟು ದೀಪದ ಬೆಳಕು ಸಿಗುವದು," ಎಂದು ಅಂದರು. ಮತ್ತು ಪಾಲಕಿಯು ಮಠಕ್ಕೆ ಹೋಯಿತು. ಪಾಲಕಿಯು ಮಠಕ್ಕೆ ಹೋಗಿ ಮುಟ್ಟಿದ್ದೇ ತಡ—ಅಷ್ಟರಲ್ಲಿ ಶಿರಾಲಿ ಪೇಟೆಯ ಅಂಗಡಿಗಳಿಗೆಲ್ಲ ಬೆಂಕಿ ಹತ್ತಿತು. ಅಂಗಡಿಗಾರರೆಲ್ಲರೂ ಕೂಡಲೇ ಘಾಬರಿಪಟ್ಟು ನಮ್ಮ ಗುರುಗಳ ಕಡೆಗೆ ಧಾವಿಸಿ ಬಂದು ಗುರುಗಳ ಪಾದಂಗಳಿಗೆ ಅಡ್ಡಬಿದ್ದು ತಮ್ಮ ಅಪರಾಧವನ್ನು ಕ್ಷಮಿಸಬೇಕಾಗಿಯೂ ಈ ಸಮಯದಲ್ಲಿ ತಮಗೆ ಸಹಾಯ ಮಾಡಬೇಕಾಗಿಯೂ ಪ್ರಾರ್ಥಿಸಿಕೊಂಡರು. ಕೂಡಲೆ ಗುರುಗಳು ತಡ ಮಾಡದೆ ಪರಿವಾರದ ಜನರನ್ನೆಲ್ಲ ಅಲ್ಲಿ ಓಡಿಸಿ ಬೆಂಕಿಯನ್ನು ನೊಂದಿಸಿದರು. ಅಂದಿನಿಂದ ಈ ಹೊತ್ತಿನ ವರೆಗೂ ಅಂಗಡಿಗಾರರೆಲ್ಲರೂ ಮಠಕ್ಕೆ ವಿಧೇಯರಾಗಿ ಭಕ್ತಿಯಿಂದ ನಡಕೊಳ್ಳುತ್ತಿದ್ದಾರೆ.

---

## ಅಧ್ಯಾಯ ೮

## ೮ನೇ ಗುರುಗಳು—ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳು

ಇವರ ಆಳ್ವಿಕೆಯು ಸನ್ ೧೮೬೩ ರಿಂದ ೧೯೧೫ ಆಗಿರುತ್ತದೆ. ಇವರು ಹುಟ್ಟಿದ್ದು ಪ್ಲವಂಗ ಸಂವತ್ಸರದ ಜೇಷ್ಠ ಶು|| ೬ ದಿವಸ (೧೮೪೭ರಲ್ಲಿ) ಆಗಿರುತ್ತದೆ. ಇವರ ರೂಪು ಕಾಣಲಿಕ್ಕೆ ಬಹಳ ಚಂದವಾಗಿದ್ದಿತು. ಇವರು ಸಣ್ಣವರಿರುವಾಗಲೇ ಇವರ ಚಪಲ ಬುದ್ಧಿ, ಮೇಲ್ತರದ ಗ್ರಹಣ ಶಕ್ತಿಯನ್ನು ನೋಡಿ ಹಿರಿಯ ಗುರುಗಳು ಇವರನ್ನು ಬಹಳ ಪ್ರೀತಿಸುತ್ತಿದ್ದರು. ಇವರ ಮುಖದ ತೇಜಸ್ಸು ನೋಡಿಯೇ ಇವರು ಶ್ರೇಷ್ಠ ಪದವಿಯನ್ನು ಪಡೆಯುವ ಯೋಗ್ಯತೆಯವರು ಎಂದು ಕಾಣಿಸುತ್ತಿತ್ತು. ಇವರ ಉತ್ಕೃಷ್ಟವಾದ ಬುದ್ಧಿ ನೋಡಿಯೇ ಹಿರಿ ಗುರುಗಳು ಇವರನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡರು. ಇವರ ಶಿಕ್ಷಣವು ಹಿರಿ ಗುರುಗಳಿಂದಲೇ ಬಹಳ ಮಟ್ಟಿಗೆ ಆಗಿತ್ತು. ಮುಂದೆ ಇವರು ಕಾಶ್ಮೀರ ದೇಶದಿಂದ ರಘುನಾಥ ಶಾಸ್ತ್ರಿ ಎಂಬ ಸಾರಸ್ವತ ಪಂಡಿತರನ್ನು ಕರೆಸಿಕೊಂಡು ಅವರ ಕಡೆಯಿಂದ ಸಂಸ್ಕೃತ, ವ್ಯಾಕರಣ, ತರ್ಕಶಾಸ್ತ್ರ, ವೇದಾಧ್ಯಯನ, ವೇದಾಂತ ಮುಂತಾ

ದ್ದೆಲ್ಲ ಕಲಿತು ಸಂಸ್ಕೃತದಲ್ಲಿಯೂ, ಶಾಸ್ತ್ರದಲ್ಲಿಯೂ ಅತಿ ನಿಪುಣರಾಗಿ ಪ್ರಖ್ಯಾತಿ ಪಡೆದರು. ಇವರು ಜೋತಿಷ್ಯಶಾಸ್ತ್ರದಲ್ಲಿಯೂ ನಿಪುಣರಾಗಿದ್ದರು. ಮಠದಲ್ಲಿ ಇದ್ದ ಶುಕ್ಲ ವೆಂಕಟೇಶ ಭಟ್ಟ, ಕ್ಯಾಕಿಣಿ ಸುಬ್ರಾಯ ಭಟ್ಟ ಶಾಸ್ತ್ರಿ, ಇವರು ಈ ಗುರುಗಳ ಸಹಪಾಠಿಗಳಾಗಿದ್ದರು. ಮಠದಲ್ಲಿ ಸಣ್ಣ ಹುಡುಗರಿಗೆ ವೇದಾಧ್ಯಯನ ಕಲಿಸುವ ಏರ್ಪಾಡು ಮಾಡಲಾಗಿತ್ತು. ಇವರು ನಮ್ಮ ಜನರಲ್ಲಿ ಸಂಚಾರಕ್ಕೆ ಹೋದಾಗ ಮಂಗೇಶ ಸುಬ್ರಾಯ ಭಟ್ಟರು (ಮರ್ತು ಭಟ್ಟ) ಧರ್ಮ ಸಮ್ಮಂಧದಲ್ಲಿ ಉಪನ್ಯಾಸಗಳನ್ನು ಕೊಡು ತಿದ್ದರು. ಕ್ಯಾಕಿಣಿ ಸುಬ್ರಾಯ ಭಟ್ಟರು ಮಠದ ಶಾಸ್ತ್ರಿಗಳಾಗಿದ್ದು ಶಾಸ್ತ್ರ ಸಂಬಂಧದ ವಿಚಾರಗಳ ನಿರ್ಣಯ ಮಾಡುವದು ಇವರ ಕೆಲಸವಾಗಿತ್ತು. ಭಕ್ತವೃಂದವು ತಮ್ಮಲ್ಲಿಯ ಜಾತಕಗಳನ್ನು ಮಾಡಿಸುವದು ಮತ್ತು ನೋಡಿಸುವದು ಕ್ಯಾಕಿಣಿ ಸುಬ್ರಾಯ ಭಟ್ಟರ ಕಡೆಯಿಂದಲೇ ಆಗಿತ್ತು. ಈ ನೋಡುವಿಕೆಯಲ್ಲಿ ಮತ ಭೇದ ಆಗಿದ್ದರೆ ಅದರ ವಿಚಾರವನ್ನು ಶ್ರೀಗಳವರೇ ಮಾಡುತ್ತಿದ್ದರು.

ಇವರ ಮಠದ ಆಡಳಿತೆಯು ಗುರುಪರಂಪರೆಯಲ್ಲಿ ದೀರ್ಘಕಾಲದ್ದೂ ಹಾಗೂ ಬಹಳ ಮಹತ್ವದ್ದೂ ಆಗಿರುತ್ತದೆ. ಇವರ ಕಾಲದಲ್ಲಿ ಆದ ಸುಧಾರಣೆಗಳು ಹಿಂದೆ ಎಂದೂ ಆಗಿದ್ದಿಲ್ಲ. ಚಿತ್ರಾಪುರ ಮಠದ ಬಹು ಭಾಗವು ಮತ್ತು ಮಠದಲ್ಲಿರುವ ಎಲ್ಲ ಗುರುಸಮಾಧಿಗಳು ಹೊಸದಾಗಿ ಕಟ್ಟಿಸಲ್ಪಟ್ಟವು. ಎಲ್ಲವುಗಳಿಗೆ ತಾಮ್ರಶಾಸನ ಹಾಕಲ್ಪಟ್ಟಿತು. ಮಠಕ್ಕೆ ಹೊಸ ಹೊಸ ಜಮೀನುಗಳು ಕೊಳ್ಳಲ್ಪಟ್ಟಿತು. ಮಠದ ಸಮೀಪ ವಿಶಾಲ ವಾದ ಜಾಗದಲ್ಲಿ ಸ್ವಚ್ಛ ನೀರಿನ ದೊಡ್ಡ ಕೆರೆಯನ್ನು ಕಟ್ಟಿಸಲಾಯಿತು. ಹಳೇ ದೇವಾಲಯಗಳ ಜೀರ್ಣೋದ್ಧಾರ ಮಾಡಲ್ಪಟ್ಟಿತು. ಮಠದ ಸಮೀಪ ಎತ್ತರವಾದ ಗುಡ್ಡೆಯ ಮೇಲೆ ವಿಶ್ರಾಂತಿ ಬಗ್ಗೆ ಪಂಚವಟಿ ಎಂಬ ಮಹಾಳಿಗೆಯ ಇಮಾರತನ್ನು ಕಟ್ಟಿಸಿದರು. ಹಾಗೂ ಅಲ್ಲಿಯ ವರೇಗೆ ಹೋಗಿ ಬರಲಿಕ್ಕೆ ವಿಶಾಲವಾದ ಮಾರ್ಗವನ್ನು ಮಾಡಿಸಿದರು. ಈ ಪಂಚ ವಟಿ ಇಮಾರತು ಬಹಳ ದೂರದಿಂದಲೂ ಸುಶೋಭಿತವಾಗಿ ಕಾಣಿಸುತ್ತದೆ. ಶಿರಾಲಿಯಿಂದ ಚಿತ್ರಾಪುರ ಮಠದ ವರೇಗೆ ಮಾರ್ಗವನ್ನು ವಿಶಾಲವಾಗಿ ಮಾಡಿಸಿದರು. ಊರಲ್ಲಿರುವ ಕೆಲವು ದೇವಾಲಯಗಳನ್ನು ಚಿತ್ರಾಪುರ ರಾಜಬೀದಿಯ ಪಕ್ಕದಲ್ಲಿ ಸ್ಥಾಪಿಸಿದರು. ಹಾಗೂ ದೊಡ್ಡ ಮಾರ್ಗದ

ಎರಡೂ ಬದಿಗಳಲ್ಲಿ ಮನೆಗಳನ್ನು ಸಾಲಾಗಿ ಕಟ್ಟಿಸುವ ವ್ಯವಸ್ಥೆ ಮಾಡಿ ಅವುಗಳಲ್ಲಿ ಇರಲಿಕ್ಕೆ ಜನರನ್ನು ಬರಮಾಡಿಕೊಂಡರು. ಮಠದ ಸಮೀಪವೇ ಟಪ್ಪಾಲು ಆಫೀಸಿನ ಬಗ್ಯೆ ಮತ್ತು ಪೋಷ್ಟು ಮಾಸ್ತರರಿಗೆ ಉಳಿಯಲಿಕ್ಕೆ ಇಮಾರತಗಳನ್ನು ಕಟ್ಟಿಸಿ ಶಿರಾಲಿಯಲ್ಲಿದ್ದ ಟಪ್ಪಾಲಾಫೀಸನ್ನು ಇಲ್ಲಿ ತರಿಸಿಕೊಂಡರು. ಅದರಂತೆ ಶಿರಾಲಿಯಲ್ಲಿದ್ದ ಕನ್ನಡ ಹುಡುಗರ ಶಾಲೆಯನ್ನು ಚಿತ್ರಾಪುರದಲ್ಲಿ ತರಿಸಿ ಅದಕ್ಕೆ ಮಠದಿಂದ ಇಮಾರತು ಕಟ್ಟಿಸಿ ಕೊಡಲಾಯಿತು. ಚಿತ್ರಾಪುರದಲ್ಲಿ ವಾರದಲ್ಲಿ ಒಂದು ದಿವಸ ಸಂತೆ ನಡೆಯುವಂತೆ ಏರ್ಪಾಡು ಮಾಡಿದರು. ರಾಜಮಾರ್ಗದ ಮೇಲೆ ರಾತ್ರಿ ಹೊತ್ತಿನಲ್ಲಿ ಬೆಳಕು ಆಗುವಂತೆ ದೀಪಸ್ತಂಭಗಳನ್ನು ಇಡಿಸಿದರು. ಒಟ್ಟಿನ ಮೇಲೆ ಚಿತ್ರಾಪುರ ಊರು ನಮ್ಮ ಜನರ ಕ್ಷೇತ್ರವಾಗಿಯೂ ಉತ್ತಮ ತರಗತಿಯಿಂದ ಸುಶೋಭಿತವಾಗಿಯೂ ರಚಿಸಲ್ಪಟ್ಟಿತು. ಇದು ಒಂದು ಸಣ್ಣ ಮುನಸಿಪಾಲಿಟಿಯ ಹಾಗೆ ಕಾಣುತ್ತಿರುವದು. ದೊಡ್ಡ ದೊಡ್ಡ ಯುರೋಪಿಯನ್ ಹಾಗೂ ಬೇರೆ ಅಧಿಕಾರಿಗಳು ಈ ಊರಲ್ಲಿ ಸರ್ಕೀಟಿನ ಮೇಲೆ ಬಂದಾಗ ಈ ಮಠವನ್ನು ನೋಡಲಿಕ್ಕೆ ಮುದ್ದಾಂ ಬಂದು ಇವರ ಕುಶಲ ಬುದ್ಧಿಯಿಂದ ಆಗಿದ್ದ ಯಾವತ್ತೂ ಕೆಲಸಗಳನ್ನು ನೋಡಿ ಸಂತೋಷ ಪಟ್ಟು ಇವರನ್ನು ಹೊಗಳುತ್ತಿದ್ದರು. ಮೇಲೆ ಬರೆದ ಎಲ್ಲ ಕೆಲಸಗಳ ಹಂಚಿಕೆ ಮುಂತಾದ್ದು ಶ್ರೀ ಗುರುಗಳ ಸ್ವಂತ ಬುದ್ಧಿಯಿಂದಲೇ ಆಗಿದ್ದರಿಂದ ಅವರು ಕಟ್ಟಿಸಿದ ಕಟ್ಟೋಣಗಳು ಇಂಜಿನಿಯರರು ಪ್ಲಾನ್ ಪ್ರಕಾರ ಮಾಡಿಸುವಂತೆಯೇ ಆಗಿರುತ್ತವೆಂದು ಜನರು ಅನ್ನುತ್ತಿದ್ದರು. ಇವರು ಸನ್ ೧೮೮೭ ರಲ್ಲಿ ಕಾಶಿಯಾತ್ರೆ ಮಾಡಿಕೊಂಡು ಬಂದರು. ಇವರು ಹೋದ ಹೋದ ಸ್ಥಳಗಳಲ್ಲೆಲ್ಲ ಮಾನ ಮರ್ಯಾದೆಗಳು ಯಥಾ ಯೋಗ್ಯವಾಗಿ ಜರುಗಿದವು. ಇವರ ಪಾಂಡಿತ್ಯ ಹಾಗೂ ಮುಖದ ಮೇಲೆ ಹೊಳೆಯುವ ವರ್ಚಸ್ಸು ನೋಡಿ ಜನರು ಬೆರಗಾಗಿ ಇವರ ಪಾದಂಗಳಿಗೆ ಎರಗುತ್ತಿದ್ದರು. ಇವರ ಕೀರ್ತಿಯು ಎಲ್ಲ ಕಡೆಗೂ ಪಸರಿಸಿತ್ತು; ಬೇರೆ ಜಾತಿಯವರಲ್ಲಿ ಕೂಡ ಕೆಲವರು ಇವರ ಭಕ್ತರಾಗಿದ್ದರು. ಇವರು ಶ್ರೀ ದತ್ತಾತ್ರೇಯ ಗುರುದೇವರ ಪ್ರತ್ಯಕ್ಷ ಅವತಾರವೆಂತ ಜನರು ಭಾವಿಸುತ್ತಿದ್ದರು. ಬೇರೆ ಜನರು ಕೂಡಾ ತಮ್ಮ ಸಂಕಷ್ಟ ಕಾಲದಲ್ಲಿ ಈ ಗುರುಗಳಿಗೆ ಹರಕೆ ಹೇಳಿಕೊಳ್ಳುತ್ತಿದ್ದರು. ಇವರು ಒಮ್ಮೊಮ್ಮೆ ಸಂಸ್ಕೃತದಿಂದಲೇ ಪ್ರವಚನವನ್ನು ಕೊಡು

ತ್ತಿದ್ದರು. ಇವರು ಬಲ್ಲಿದರೂ, ನಿರ್ಭಯ ವೃತ್ತಿ ಉಳ್ಳವರೂ, ಆಗಿದ್ದರಿಂದ ಧರ್ಮ ವಿಚಾರದಲ್ಲಿ ಭಕ್ತ ವೃಂದಕ್ಕೆ ಧರ್ಮಾಧ ವಿರುದ್ಧ ನಡೆಯಗೊಡು ತ್ತಿದ್ದಿಲ್ಲ. ಧರ್ಮದ ವಿರುದ್ಧವಾಗಿ ನಡೆದವರನ್ನು ಶಾಸ್ತ್ರ ನಿಯಮದಂತೆ ಶಾಸನ ಮಾಡುತ್ತಿದ್ದರು. ಈ ತರದ ಗುರುಗಳ ಸರಳವೃತ್ತಿಯು ಕೆಲವರಿಗೆ ಬಿರುಸಾಗಿ ತೋರಿ ಗುರುಗಳಿಗೆ ಎಡರು ತೊಡರುಗಳನ್ನುಂಟುಮಾಡಿದರು. ಇಂಗ್ಲಂಡಕ್ಕೆ ಹೋದ ಜನರ ವಿಷಯದಲ್ಲಿ ಒಂದು ಪ್ರಶ್ನೆಯು ಉಪಸ್ಥಿತ ವಾಗಿ ಅದರ ನಿರ್ಣಯವು ಮಹಾಸಭೆ ಕರೆದು ಅದರಲ್ಲಿ ಮಾಡಲಾಯಿತು. ಈ ನಿರ್ಣಯವು ಸುಧಾರಕರಿಗೆ ಸರಿತೋರದೆ ಈ ಕಾರಣದಿಂದ ಗುರುಗಳು ಸುಧಾರಕರಲ್ಲಿ ಕೆಲಮಟ್ಟಿಗೆ ಅಪ್ರಿಯರಾಗಲಿಕ್ಕೆ ಕಾರಣರಾದರು. ಆದರೂ ಶ್ರೀ ಗುರುಗಳು ತಮ್ಮ ಭಕ್ತವೃಂದದಲ್ಲಿ ಉತ್ತರೋತ್ತರ ಶ್ರೇಯೋಭಿವೃದ್ಧಿ ಯನ್ನು ಅನುಗ್ರಹಿಸಿ ಕಾಪಾಡುವಂತೆ ಶ್ರೀ ಭವಾನಿಶಂಕರ ದೇವರಲ್ಲಿ ಸದಾ ಪ್ರಾರ್ಥನೆ ಮಾಡುತ್ತಿದ್ದರು. ಇದರ ಪರಿಣಾಮವಾಗಿ ಶ್ರೀ ಗುರುಗಳು ನಮ್ಮನ್ನು ಸಂಕಷ್ಟದಿಂದ ಕಾಪಾಡಿದ ದೃಷ್ಟಾಂತಗಳು ಬಹಳ ಇರುತ್ತವೆ. ಅವುಗಳಲ್ಲಿ ಮಹತ್ವದ ೩ ಸಂಗತಿಗಳನ್ನು ನಾನು ಈ ಕೆಳಗೆ ಕೊಡುತ್ತೇನೆ.

೧. ಹಳಿಯಾಳದಲ್ಲಿ ಗಣಪತರಾಮಜಿ ಮಾನೆ ಎಂಬವರು ಫೋರೆಷ್ಟ ರೇಂಜರರಾಗಿದ್ದರು. ಹಳಿಯಾಳ ಮಾಮಲೇದಾರರ ಮುಂದೆ ನಡೆದ ಒಂದು ಅಡವಿ ಖಟ್ಲೆಯಲ್ಲಿ ಮೆಜಿಸ್ಟ್ರೇಟರಿಗೆ ರೇಂಜರರ ವರ್ತನ ಸಮ್ಮಂಧ ಸಂಶಯ ಬಂದು ಅವರು ಅಪರಾಧಿ ಎಂತ ಠರಾಯಿಸಿ ಅದರಂತೆ ತಮ್ಮ ತೀರ್ಪಿನಲ್ಲಿ ಬರೆದರು. ಕನ್ಸರ್ವೇಟರರು ಮೆಜಿಸ್ಟ್ರೇಟರ ತೀರ್ಪಿನಂತೆ ಮಾನೆಯವರನ್ನು ಕೆಲಸದಿಂದ ದೂರಮಾಡಿದರು. ಮಾನೆಯವರು ತಮ್ಮ ಕೆಲಸ ಹೋಗಿ ತನಗೆ ಅಪಮಾನಕರ ಸ್ಥಿತಿ ಬಂದಿದ್ದ ಬಗ್ಗೆ ದುಃಖಪಟ್ಟು ಮುಂದೆ ಏನು ಮಾಡಬೇಕೆಂಬುದು ತಿಳಿಯದೆ ಚಿಂತಾಗ್ರಸ್ತರಾಗಿದ್ದ ಕಾಲ ದಲ್ಲಿ ಅವರ ಸಾರಸ್ವತ ಸ್ನೇಹಿತರೊಬ್ಬರು ಅಕಸ್ಮಾತ್ ಅವರ ಭೇಟಿಗೆ ಬಂದಿದ್ದರು. ಆಗ ಅವರೊಡನೆ ತನಗೆ ಒದಗಿದ ಸಂಕಷ್ಟವನ್ನು ತಿಳಿಸಿ ಹೇಳಿದರು. ಆ ಸಾರಸ್ವತ ಸ್ನೇಹಿತರು ಇವರನ್ನು ಕುರಿತು— "ನಮ್ಮ ಚಿತ್ರಾಪುರ ಮಠದ ಸ್ವಾಮಿಯವರಿಗೆ ಶರಣು ಹೋಗು, ಹಾಗೂ ಅಲ್ಲಿಯ ಮಠದ ಶ್ರೀ ಭವಾನಿಶಂಕರ ದೇವರಿಗೆ ಮಹಾರುದ್ರ ಸೇವೆ ಮಾಡುತ್ತೇನೆಂದು

ಹರಿಕೆ ಹೇಳಿಕೊ. ಅಂದರೆ ದೇವರು ನಿನಗೆ ಬಂದ ಕಷ್ಟದಿಂದ ನಿನ್ನನ್ನು ಕಾಪಾಡುವನು." ಎಂದು ಹೇಳಿದರು. ಅದರಂತೆ ಅವರು ಶ್ರೀ ಪಾಂಡುರಂಗಾಶ್ರಮ ಗುರುಗಳಿಗೆ ಒಂದು ಬಿನ್ನವತ್ತಳೆ ಬರೆದುಕೊಂಡರು. ಗುರುಗಳು ಅದನ್ನು ಅಂಗೀಕರಿಸಿ ಶ್ರೀ ಭವಾನಿಶಂಕರ ದೇವರಲ್ಲಿ ವಿಶೇಷ ವಾದ ಪ್ರಾರ್ಥನೆ ಮಾಡಿ ದೇವರ ಪ್ರಸಾದವನ್ನು ಮಾನೆಯವರಿಗೆ ಕಳಿಸಿ ದರು. ಮತ್ತು ಈ ಪ್ರಸಾದವು ಎಲ್ಲಿಯೂ ಚೆಲ್ಲದೆ ಖಟ್ಲೆಯ ನಿಕಾಲಿ ಆಗುವ ವರೆಗೆ ದೇಹದ ಮೇಲೆಯೇ ಧರಿಸಿಕೊಳ್ಳಬೇಕೆಂಬುದಾಗಿ ಆಜ್ಞಾ ಪಿಸಿದರು. ತರುವಾಯ ಮಾನೆಯವರು ಇಂಗ್ಲಂಡಕ್ಕೆ ರಜೆ ಮೇಲೆ ಹೋಗಿದ್ದ ತಮ್ಮ ಸಾಹೇಬ ಡಿವಿಜನಲ್ ಫೋರೆಸ್ಟ್ ಆಫೀಸರರಾದ ಮಿ। ಉಡ್ರು ಇವರಿಗೆ ನಡೆದ ಎಲ್ಲ ಸಂಗತಿಯನ್ನು ಬರೆದು ತಿಳಿಸಿದರು. ಆ ಸಾಹೇಬರ ಮರ್ಜಿ ಇವರ ಮೇಲೆ ಪೂರ್ಣ ಇತ್ತು. ಆದ್ದರಿಂದ ಇವರಿಗೆ ಅವಶ್ಯವಿರುವ ಸಹಾಯಮಾಡಿ ಇವರನ್ನು ಕಷ್ಟದಿಂದ ಮುಕ್ತ ಮಾಡಲಿಕ್ಕೆ ಬರುವಂತಿದ್ದರೆ ಹಾಗೆ ಮಾಡಬೇಕೆಂಬ ಉದ್ದೇಶದಿಂದ ಅವರು ಕೂಡಲೇ ಇಂಗ್ಲಂಡದಿಂದ ಹೊರಟು ಬಂದರು. ಇಲ್ಲಿ ಬಂದ ಮೇಲೆ ಅವರು ಖಟ್ಲೆ ಕಾಗದಗಳನ್ನು ಓದಿನೋಡಿ ಇವರು ನಿರಪರಾಧಿ ಇದ್ದ ಬಗ್ಗೆ ಸಾಕಷ್ಟು ಆಧಾರ ಇರುವುದಾಗಿ ಮನಗಂಡು ಸರಕಾರಕ್ಕೆ ಅವರ ಕಡೆಯಿಂದ ಅಪೀಲು ಮಾಡಿಸಿದರು. ಸರಕಾರದವರು ಖಟ್ಲೆಯ ಕಾಗದ ಪತ್ರಗಳ ನ್ನೆಲ್ಲ ಚನ್ನಾಗಿ ಓದಿಕೊಂಡು ಈ ಖಟ್ಲೆಯಲ್ಲಿ ಮಾನೆಯವರ ತಪ್ಪು ಏನೂ ಇಲ್ಲ ಎಂದು ನಿಶ್ಚಯಿಸಿ ಅವರು ನಿರಪರಾಧಿ ಎಂತಲೂ, ಅವರಿಗೆ ಪುನಃ ಅವರ ಕೆಲಸ ಕೊಡಬೇಕಾಗಿಯೂ ಹಾಗೂ ಅವರ ಹಿಂದಿನ ಪಗಾರವೆಲ್ಲ ಕೊಡಬೇಕಾಗಿಯೂ ನಿಕಾಲಿಮಾಡಿದರು. ಇಷ್ಟೇ ಅಲ್ಲ, ಖಟ್ಲೆಯಲ್ಲಿ ಬಂದ ಪುರಾವೆಗಳ ಮೇಲಿಂದ ಮಾನೆಯವರು ಮಾಡಿದ ಕೆಲಸಗಳಿಗೆ ಅವರು ಹೆಚ್ಚಿನ ದೊಡ್ಡ ಅಧಿಕಾರಕ್ಕೆ ಯೋಗ್ಯರಾಗಿ ಕಾಣುವದರಿಂದ ಅವ ರಿಗೆ ಎಕ್ಸ್ಟ್ರಾ ಅಸಿಸ್ಟಂಟ ಕನ್ಸರ್ವೇಟರೀ ಜಾಗಕೊಡಬಹುದಾಗಿ ಅಭಿ ಪ್ರಾಯಪಟ್ಟರು. ಆ ಪ್ರಕಾರ ಅವರು ಅಸಿಸ್ಟಂಟ ಕನ್ಸರ್ವೇಟರರಾದರು. ಇಷ್ಟೆಲ್ಲ ಆದದ್ದು ನಮ್ಮ ಗುರುಗಳ ಆಶೀರ್ವಾದದ ಫಲವೆಂದು ಮಾನೆಯವರು ಮನಸ್ಸಿನಲ್ಲಿ ಖಾತ್ರಿಮಾಡಿಕೊಂಡು ತಾನು ದೇವರಲ್ಲಿ ಹೇಳಿಕೊಂಡ ಹರಿಕೆ

ಯನ್ನು ಒಪ್ಪಿಸಿದ್ದಲ್ಲದೆ ಅವರು ಪ್ರತಿ ವರ್ಷ ಮಠದ ಉತ್ಸವದ ಕಾಲವಲ್ಲಿ ಮಠಕ್ಕೆ ಹೋಗಿ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು.

೨. ಭಟ್ಕಳದಲ್ಲಿ ಬೈಂದೂರ ಮಂಗೇಶರಾವ್ ಎಂಬವರು ಮಹಾಲಕರಿ ಇದ್ದರು. ಅವರ ಮೇಲೆ ಅಲ್ಲಿಯ ಮುಸಲ್ಮಾನರು ಒಂದು ಸುಳ್ಳು ಖಟ್ಲೆ ಮಾಡಿದರು. ಸರಕಾರಿ ಮಾರ್ಗಗಳ ಬದಿಗಿರುವ ಒಣಗಿದ ಮರಗಳನ್ನು ಕಡಿಮೆ ಸವಾಲಿಗೆ ತನ್ನವರೊಬ್ಬರಿಗೆ ಕೊಟ್ಟು ಸರಕಾರಕ್ಕೆ ಲುಕ್ಸಾನ ಮಾಡಿದರು ಎಂಬ ಆರೋಪವು ಅವರ ಮೇಲೆ ಹಾಕಲಾಗಿತ್ತು. ಆದರೆ ಚವಕಶಿ ರೀತಿ ಪ್ರಕಾರ ಆಗಿ ಅವರು ಸಸ್ಪೆಂಡ್ ಮಾಡಲ್ಪಟ್ಟರು. ಮತ್ತು ಖಟ್ಲೆಯು ಡಿವಿಜನಲ್ ಮೆಜಿಸ್ಟ್ರೇಟರಾದ ಮಿ| ಟೋಡ್ಡ ಸಾಹೇಬರ ಕಡೆಗೆ ವಿಚಾರಕ್ಕೆ ಹೋಯಿತು. ಆ ಸಾಹೇಬರು ಇವರಿಗೆ ವಿಚಾರದ ಬಗ್ಗೆ ಕಾರವಾರವಲ್ಲಿ ಹಾಜರಾಗಲಿಕ್ಕೆ ಹುಕುಂ ಕೊಟ್ಟರು. ಆ ಪ್ರಕಾರ ಇವರು ಭಟ್ಕಳದಿಂದ ಕಾರವಾರಕ್ಕೆ ಸಾಹೇಬರ ಕೋರ್ಟಿಗೆ ಹಾಜರಾಗಲಿಕ್ಕೆ ಹೋಗುವ ಪೂರ್ವವಲ್ಲಿ ಚಿತ್ರಾಪುರ ಮಠಕ್ಕೆ ಹೋದರು. ಅಲ್ಲಿ ಶ್ರೀ ಗುರುಗಳಿಗೆ ಭೇಟಿಯಾಗಿ ತನ್ನನ್ನು ಈ ಕಷ್ಟದಿಂದ ಪಾರುಮಾಡಬೇಕೆಂಬುದಾಗಿ ಪ್ರಾರ್ಥನೆ ಮಾಡಿ ಅವರ ಪಾದಂಗಳಿಗೆ ಸಾಷ್ಟಾಂಗವೆರಗಿದರು. ಹಾಗೂ "ತಾನು ಈ ಕಷ್ಟದಿಂದ ಮುಕ್ತನಾದೇನು ಎಂತ ಅಭಿವಚನವನ್ನು ಶ್ರೀ ಗುರುಗಳು ತನಗೆ ಕೊಟ್ಟು ಆಶೀರ್ವಾದ ಮಾಡಿದ ಹೊರತು ತಾನು ಇಲ್ಲಿಂದ ಹೋಗುವ ಹಾಗಿಲ್ಲ" ಎಂದು ದೇವರ ಮುಂದೆ ಹೋಗಿ ಅಡ್ಡಬಿದ್ದವರು ಏಳದೆ ಇರುವಾಗ್ಯೆ ಶ್ರೀ ಗುರುಗಳು ಭವಾನೀಶಂಕರ ದೇವರಲ್ಲಿ ವಿಶೇಷವಾದ ಪ್ರಾರ್ಥನೆ ಮಾಡಿ — "ಭವಾನೀಶಂಕರ ದೇವರು ನಿನಗೆ ಕಲ್ಯಾಣ ಮಾಡಿ ನಿನ್ನ ಮಾನವನ್ನು ಕಾಯುವರು. ಎದ್ದು ಹೋಗು. ಕಾಳಜೀ ಮಾಡಬೇಡ" ಹೀಗೆ ಅವರಿಗೆ ಅಭಯವಚನದಿಂದ ದೇವರ ಪ್ರಸಾದವನ್ನು ಕೊಟ್ಟು ಆಶೀರ್ವಾದ ಮಾಡಿದರು. ಮಂಗೇಶರಾಯರು ಅಲ್ಲಿಂದ ಎದ್ದು ಶ್ರೀ ಗುರುಗಳಿಗೆ ನಮಸ್ಕರಿಸಿ ಕಾರವಾರಕ್ಕೆ ಹೋದರು. ಸಾಹೇಬರು ಕೋರ್ಟಿನಲ್ಲಿ ಖಟ್ಲೆ ವಿಚಾರಕ್ಕೆ ಪ್ರಾರಂಭ ಮಾಡಿ ಆರೋಪಿಯ ಜಬಾನಿ ತಕ್ಕೊಳ್ಳಹತ್ತಿದರು. ಆ ಸಮಯಕ್ಕೆ ಫೋರೆಸ್ಟ ಕನ್ಸರ್ವೇಟರರಾದ ಕರ್ನಲ್ ಪೇಟನ್ ಸಾಹೇಬರು ಯಲ್ಲಾಪುರದಿಂದ ಕಾರವಾರಕ್ಕೆ ಅಕಸ್ಮಾತ್ತಾಗಿ ಬಂದರು. ತಮ್ಮ ಬಂಗಲೆಗೆ ಹೋಗುವಾಗ ದಾರಿಯಲ್ಲಿ

ಮಿ। ಟೋಡ್ಡ್ ಸಾಹೇಬರ ಖಚೇರಿ ಮುಂದೆ ಬಹಳ ಜನರು ನೆರೆದದ್ದು ನೋಡಿ ತನ್ನ ಸ್ನೇಹಿತರಾದ ಮಿ। ಟೋಡ್ಡ್ ಸಾಹೇಬರನ್ನು ಭೇಟಿಮಾಡಿ ಹೋಗಬೇಕೆಂದು ಯೋಚಿಸಿ ಅವರ ಖಚೇರಿಗೆ ನೆಟ್ಟಗೆ ಹೋದರು. ಖಚೇರಿ ಯೊಳಗೆ ಹೋಗುವಾಗ ಖಚೇರಿಯ ಹೊರಗೆ ಕೂಡಿಹಾಕಿಟ್ಟಿದ್ದ ಜನ್ಪಾದ ಮಾವಿನ ಹಲಗೆಗಳ ರಾಶಿಯನ್ನು ಕಂಡು ಅದನ್ನು ಕಾಲಿನಿಂದ ತುಳಿದು— "ಇದು ಎಂಥ ನಿರುಪಯೋಗಿ, ಕೆಟ್ಟ ಕಟ್ಟಿಗೆ" ಎಂದು ತನ್ನಷ್ಟಕ್ಕೆ ಅಂದು ಕೊಂಡು ಒಳಗೆ ಹೋದರು. ಅಲ್ಲಿ ಮಿ। ಟೋಡ್ಡ್ ಸಾಹೇಬ ಹಾಗೂ ಇವರ ಪರಸ್ಪರ ಭೇಟಿಯಲ್ಲಿ ಮಾತಾಡುತ್ತಿದ್ದಂತೆ ಪ್ರಕೃತ ನಡೆಯುವ ಖಟ್ಲೆಯ ವಿಷಯ ಬಂತು. ಅದನ್ನು ಮಿ। ಟೋಡ್ಡ್ ಸಾಹೇಬರು ವಿವರವಾಗಿ ಅವ ರೊಡನೆ ತಿಳಿಸಿದರು. ಮತ್ತು ಈ ಕಟ್ಟಿಗೆ ಸಂಗತಿಯಲ್ಲಿ ಈ ಸಾಹೇಬರು ಅದರ ಮರ್ಮವನ್ನು ತಿಳಿದವರಾದ್ದರಿಂದ ಇವರ ಅಭಿಪ್ರಾಯಕ್ಕೇ ಪ್ರಾಧಾನ್ಯ ಕೊಡಬೇಕೆಂದು ಮನಸ್ಸುಮಾಡಿ ಇವರ ಜಬಾನಿಯನ್ನು ಪ್ರಮಾಣದ ಮೇಲೆ ತೆಗೆದುಕೊಂಡರು. ಅವರ ಜಬಾನಿ ಮೇಲಿಂದ ಖಟ್ಲೆಯ ಸ್ವರೂಪವು ಒಮ್ಮೇಲೆ ಬದಲಾಯಿತು. ಮಂಗೇಶರಾಯರು ಲಿಲಾಂವಮಾಡಿದ ಬೆಲೆಯು ಕಡಿಮೆಯಲ್ಲದೆ ಯೋಗ್ಯವಾದದ್ದೆಂದು ನಿರ್ಣಯಿಸಿ ಅವರು ನಿರಪರಾಧಿ ಎಂಥ ತೀರ್ಪುಕೊಟ್ಟರು. ಮತ್ತು ಅವರನ್ನು ಗೌರವದಿಂದ ಬಿಡುಗಡೆ ಮಾಡಿದರು. ಹಾಗೂ ಅವರ ಮಹಾಲ್‌ಕರೀ ಜಾಗ ಅವರಿಗೆ ತಿರಿಗಿಕೊಟ್ಟರು. ಖಟ್ಲೆ ನಡಿಯುವಾಗ ಕರ್ನಲ್ ಪೇಟನ್ ಸಾಹೇಬರು ಅಕಸ್ಮಾತ್ತಾಗಿ ಬಂದು ಮಂಗೇಶರಾಯರನ್ನು ಖಟ್ಲೆಯಿಂದ ಬದುಕಿಸಿದ್ದು ನಮ್ಮ ಗುರುಗಳ ಅನುಗ್ರಹವೇ ಸರಿ.

೩. ಇದೊಂದು ಕುಂದಾಪುರ ಸಾಹುಕಾರನ ವೃತ್ತಾಂತ— ಕಾಮತ್ ಎಂಬವರು ಕುಂದಾಪುರ ಊರಿನಲ್ಲಿ ಸಾಹುಕಾರರಾಗಿದ್ದು ಕಳ್ಳ ಉಪ್ಪಿನ ವ್ಯಾಪಾರಮಾಡುತ್ತಾರೆಂಬ ಆರೋಪದ ಮೇಲೆ ಖಟ್ಲೆಯಾಗಿ ಒಬ್ಬ ಕ್ರಿಶ್ಚನ್ ಮೆಜಿಸ್ಟ್ರೇಟರ ಕಡೆಗೆ ಖಟ್ಲೆಯು ವಿಚಾರಕ್ಕೆ ಬಂದಿತು. ಮೆಜಿಸ್ಟ್ರೇ ಟರು ಖಟ್ಲೆ ವಿಚಾರವನ್ನು ಪೂರ್ಣಪಡಿಸಿ ತೀರ್ಪು ಹೇಳುವದಷ್ಟೇ ಕೆಲಸ ಬಾಕಿಇಟ್ಟು ಅದನ್ನು ಮರುದಿವಸ ಹೇಳುತ್ತೇನೆಂತ ಆರೋಪಿಗೆ ತಿಳಿಸಿದರು. ಆರೋಪಿಯು ತನಗೆ ಶಿಕ್ಷೆ ಆಗುವದೋ ಏನೋ ಎಂಬ ಚಿಂತೆಮಾಡುತ್ತಾ ಕೂತಿದ್ದ ಸಮಯದಲ್ಲಿ ಅವನ ಸಾರಸ್ವತ ಸ್ನೇಹಿತರೊಬ್ಬರು ಅವರನ್ನು

ಕುರಿತು—"ಯಾಕೆ ಚಿಂತೆಮಾಡುತ್ತೀರಿ, ನಾಳೆ ಬೆಳಿಗ್ಗೆ ನಮ್ಮ ಗುರುಗಳಾದ ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳು ಇಲ್ಲಿ ಬರುವವರಿದ್ದಾರೆ. ಅವರಿಗೆ ನೀವು ಶರಣುಹೋಗಿ ದೈನ್ಯದಿಂದ ಬೇಡಿಕೊಳ್ಳಿರಿ. ಅವರು ನಿಮ್ಮ ಚಿಂತೆಯನ್ನು ದೂರಮಾಡುವರು" ಎಂತ ಹೇಳಿದರು. ಆ ಪ್ರಕಾರ ಕಾಮತರು ಗುರುಸ್ವಾಮಿಗಳು ಬರುವ ದಾರಿಯಲ್ಲಿ ಹೋಗಿ ಕಾದು ಕುಳಿತು ಅವರು ಬಂದಕೂಡಲೆ ಅವರ ಪಲ್ಲಕಿಯ ಮುಂದೆ ಮಾರ್ಗದ ಮೇಲೆಯೇ ಸಾಷ್ಟಾಂಗ ವೆರಗಿದರು. ಪಲ್ಲಕಿಯ ಸಮೀಪ ಇದ್ದ ನಮ್ಮ ಜನರು ಅವರನ್ನು ಎಬ್ಬಿಸಿ ಗುರುಗಳವರ ಸನ್ನಿಧಿಯಲ್ಲಿ ನಿಲ್ಲಿಸಿದರು. ಅಲ್ಲಿ ಅವರು ಶ್ರೀ ಗುರುಗಳವರಿಗೆ ವಂದನೆ ಮಾಡಿ—"ಸ್ವಾಮಿನ್, ನನ್ನ ಮೇಲೆ ಒಂದು ಖಟ್ಲೆಯಾಗಿದೆ. ಈ ಹೊತ್ತು ಖಟ್ಲೆಯ ತೀರ್ಪು ಕೇಳಲಿಕ್ಕೆ ನಾನು ಕೋರ್ಟಿಗೆ ಹೋಗಬೇಕಾಗಿದೆ. ನನಗೆ ಶಿಕ್ಷೆಯಾಗುವದು ಖಂಡಿತವೆಂತ ತಿಳಿಯುತ್ತೇನೆ. ಇಂಥ ಅಪಮಾನ ಸಹಿಸಿ ಇರುವದಕ್ಕಿಂತಲೂ ಮರಣವೇ ಲೇಸು ಎಂತ ತಿಳಿದುಕೊಂಡು ಸಾಯುವ ಮೊದಲು ಸನ್ನಿಧಿಯ ಪಾದಂಗಳ ಭೇಟಿಮಾಡಿ ಹೋಗಬೇಕೆಂತ ಬಂದಿದ್ದೇನೆ ಎಂದರು ಇದನ್ನು ಕೇಳಿ, ಗುರುಗಳಿಗೆ ಕನಿಕರ ಹುಟ್ಟಿ ಅವರನ್ನು ಕುರಿತು—"ದುಃಖಪಡಬೇಡ, ಶ್ರೀ ಭವಾನೀ ಶಂಕರನು ನಿನ್ನನ್ನು ರಕ್ಷಿಸುವನು. ನಾವು ಇದ್ದ ಸ್ಥಳಕ್ಕೆ ಮಧ್ಯಾಹ್ನದ ಮಹಾ ಪೂಜೆಗೆ ಬಾ" ಎಂದು ಹೇಳಿ ದೇವರ ಪ್ರಸಾದಕೊಟ್ಟರು. ಆ ಪ್ರಸಾದವನ್ನು ಕಾಮತರು ತನ್ನ ರುಮಾಲಿನ ಶೆರಗಿಗೆ ಘಟ್ಟಿಯಾಗಿ ಕಟ್ಟಿಕೊಂಡು ನೆಟ್ಟಗೆ ಕೋರ್ಟಿಗೆ ಠರಾವು ಕೇಳಲಿಕ್ಕೆ ಹೋದರು. ಆ ಕ್ರಿಶ್ಚನ್ ಮೆಜಿಸ್ಟ್ರೇಟರು ಖಟ್ಲೆಯ ಕಾಗದ ಪತ್ರಗಳನ್ನು ಮನೆಗೆ ಒಯ್ದು ಠರಾವು ಬರೆಯಲಿಕ್ಕಾಗಿ ಆ ದಿವಸ ಬೆಳಿಗ್ಗೆ ಮನೆಯಲ್ಲಿಯೇ ಕುಳಿತಿದ್ದರು. ಆ ಸಮಯದಲ್ಲಿ ಅವರ ಕಾರಕೂನನೂ ಅಲ್ಲಿಯೇ ಇದ್ದನು. ಆ ಕಾರಕೂನನು ಸಾರಸ್ವತನೇ ಆಗಿದ್ದನು. ಅವರು ತೀರ್ಪು ಬರೆದು ಬಹಳ ಮಟ್ಟಿಗೆ ಆಗಿತ್ತು. ಮುಖ್ಯ ಠರಾವು ಬರೆಯುವದೊಂದೇ ಬಾಕಿ ಇತ್ತು. ಆಗ ಅಕಸ್ಮಾತ್ ಅವರು ತಮ್ಮ ತಲೆಯನ್ನು ಕೆದರಿದ ಹಾಗೆ ಮಾಡಿ ಬರೆಯುವದನ್ನು ಹಾಗೇ ಬಿಟ್ಟು ಸುಮ್ಮನೆ ಕೂತರು. ಮತ್ತು—"ಇದೇನು! ತನಗೆ ಮುಂದೆ ಏನು ಬರೆಯಬೇಕೆಂಬುದು ತಿಳಿಯದ ಹಾಗೆ ಆಗಿದೆ. ಈ ಹೊತ್ತು ತನ್ನ ತಲೆಗೆ ಏನಾಗಿದೆಂಬುದು ತಿಳಿಯುವದಿಲ್ಲ. ಬರೆಯಲಿಕ್ಕೆ ಏನೂ ಸೂಚಿಸು

ವದಿಲ್ಲ" ಎಂತ ಕಾರಕೂನರ ಕಡೆಗೆ ಹೇಳಿದರು. ಹಾಗೂ ಕೈಯಲ್ಲಿದ್ದ ಲೇಖನಿಯನ್ನು ಕೆಳಗೆ ಇಟ್ಟು ಧ್ಯಾನಸ್ಥರಂತೆ ಕುಳಿತರು. ಅದಕ್ಕೆ ಕಾರ-ಕೂನರು— "ಎಲ್ಲ ಕಾಗದ ಪತ್ರಗಳು ತಮ್ಮ ಕಡೆಗೇ ಇದ್ದಾವೆ. ತಾವು ಬಹಳವಾಗಿ ತೀರ್ಪು ಬರೆದಿದ್ದೀರಿ. ಕಡೆಗಿನ ತೀರ್ಪು ಮಾತ್ರ ಬರೆಯುವದು ಬಾಕಿ ಇದ್ದಂತೆ ಕಾಣುತ್ತದೆ. ಅಷ್ಟು ಬರೆದು ಮುಗಿಸಿದರೆ ಆಯಿತು" ಎಂದು ಅಂದರು. ಅದಕ್ಕವರು— "ಅದೇ ಬರೆಯುವದು ನನಗೆ ಕಠಿಣವಾಗಿದೆ. ಈ ಹೊತ್ತು ಹೀಗಾಗಲಿಕ್ಕೆ ಕಾರಣ ಏನಿರಬಹುದು?" ಎಂದು ಕಾರಕೂನ ರನ್ನು ಕೇಳಿದರು. ಅದಕ್ಕೆ ಕಾರಕೂನರು— "ನನಗೇನು ಗೊತ್ತು ಸ್ವಾಮಿ ನಾನು ಇಷ್ಟು ಮಾತ್ರ ಹೇಳಬಲ್ಲೆ. ಏನೆಂದರೆ, ಈ ಹೊತ್ತು ಬೆಳಿಗ್ಗೆ ಆರೋಪಿಯು ನಮ್ಮ ಗುರುಗಳಿಗೆ ಭೇಟಿಯಾಗಿ ಅವರ ಕಡೆಯಿಂದ ಶುಭ ಆಶೀರ್ವಾದವನ್ನು ಪಡಕೊಂಡು ಹೋಗಿದ್ದಾನೆ" ಎಂದು ಹೇಳಿದರು. ಅದಕ್ಕವರು— ನಿಮ್ಮ ಸ್ವಾಮಿಗಳು ಅಂಥ ಕರ್ತವ್ಯಶಾಲಿಗಳೊ? ಈ ತರದ ಅದ್ಭುತ ಚಮತ್ಕಾರ ಮಾಡುವಷ್ಟು ಸಾಮರ್ಥ್ಯ ಉಳ್ಳವರೊ?" ಎಂದು ಕೇಳಿದರು— "ಹೌದು ಸ್ವಾಮಿ, ನಮ್ಮ ವಿಶ್ವಾಸ ಹಾಗೆ ಅದೆ" ಎಂದು ಕಾರಕೂನರು ಹೇಳಿದರು. ಆಗ ಅವರು ಬಹಳ ಹೊತ್ತಿನ ವರೆಗೆ ವಿಚಾರ ಮಾಡುತ್ತ ಕೂತರು. ಕಟ್ಟಕಡೆಗೆ ವಿಚಾರಾಂತ್ಯದಲ್ಲಿ ಕೆಳಗಿನಂತೆ ಠರಾವು ಬರೆದರು— "ಫಿರ್ಯಾದಿ ತರ್ಫಿನಿಂದ ಬಂದ ಲೇಖಿ ಮತ್ತು ಬಾಯಿಯ ಪುರಾವೆ ಮೇಲಿಂದ ಆರೋಪಿಯು ಗುನ್ಹೆಗಾರನೆಂದು ಸ್ಪಷ್ಟವಾಗುತ್ತದೆ. ಆದರೆ ಕೋರ್ಟಿನ ಮುಂದೆ ಹಾಜರಾದ ಉಪ್ಪಿಗೂ ಬಜಾರದಲ್ಲಿ ಸಿಗುವ ಉಪ್ಪಿಗೂ ಏನೂ ಭೇದ ಕಾಣುವದಿಲ್ಲಾದ್ದರಿಂದ ಇದು ಕಳ್ಳತನದಿಂದ ಮಾಡಿದ ಉಪ್ಪು ಎಂತ ಎಣಿಸಲಿಕ್ಕೆ ಬರುವದಿಲ್ಲ, ಆದ್ದರಿಂದ ಆರೋಪಿಯು ಗುನ್ಹೇಗಾರನಲ್ಲ ಎಂತ ನಾನು ಠರಾಯಿಸಿ ಅವನನ್ನು ಬಿಡುತ್ತೇನೆ." ಸಂಜೆಗೆ ಕೋರ್ಟಿಗೆ ಹೋಗಿ ಆ ತೀರ್ಪನ್ನು ಓದಿ ಹೇಳಿದರು. ಹಾಗೂ ಆರೋಪಿಗೆ ಬಿಟ್ಟುಕೊಟ್ಟರು. ಕಾಮತರು ಸಂತೋಷಪಟ್ಟು ಶ್ರೀ ಗುರುಗಳ ಅನುಗ್ರಹದಿಂದಲೇ ತಾನು ಬದುಕಿದೆನು, ಎಂತ ಎಣಿಸಿ, ಕೂಡಲೇ ಶ್ರೀ ಗುರುಗಳ ಸನ್ನಿಧಿಗೆ ಹೋಗಿ ಅವರ ಪಾದಂಗಳಿಗೆ ನಮಸ್ಕರಿಸಿದರು. ಹಾಗೂ ನಡೆದ ವೃತ್ತಾಂತವನ್ನು ತಿಳಿಸಿ ಅವರ ಪಾದಪೂಜೆ ಮಾಡಿದರು.

ಅಂದಿನಿಂದ ಕಾಮತರು ಶ್ರೀ. ಗುರುಗಳಲ್ಲಿ ಬಹಳ ಭಕ್ತಿ ವಿಶ್ವಾಸವಿಟ್ಟು ಅವರ ಸೇವೆಯಲ್ಲಿ ಯಾವಾಗಲೂ ತತ್ಪರರಾಗಿ ನಡಕೊಳ್ಳುತ್ತಿದ್ದರು.

ಈ ಸ್ವಾಮಿಗಳ ಆಡಳತೆಯು ಹಿಂದಿನ ಎಲ್ಲ ಸ್ವಾಮಿಗಳಕ್ಕಿಂತ ಹೆಚ್ಚಿನ ಕಾಲದ್ದು; ೫೨ ವರುಷಗಳಷ್ಟು ಆಗಿರುತ್ತದೆ. ಇವರ ಕಡೇ ದಿವಸ ಗಳಲ್ಲಿ ಭಕ್ತವೃಂದದಲ್ಲಿ ಕೆಲವರು ಪಾಶ್ಚಾತ್ಯ ಸಂಸ್ಕೃತಿಯ ಮೂಲಕ ಧರ್ಮದ ವಿರುದ್ಧವಾಗಿ ವರ್ತಿಸಹತ್ತಿದ್ದರಿಂದ ಗುರುಗಳು ಮನಸ್ಸಿನಲ್ಲಿ ಬಹಳ ನೊಂದುಕೊಂಡರು. ಶಿಷ್ಯಸ್ವೀಕಾರಮಾಡಿಕೊಳ್ಳಬೇಕಾಗಿ ಜನರು ಹೇಳಿಕೊಂಡದಕ್ಕೆ ಗುರುಗಳು ಸಮ್ಮತಿಸಲಿಲ್ಲ. ಹೀಗಿರುವಾಗ ಸನ್ ೧೯೧೫ ರಲ್ಲಿ ಗುರುಗಳು ಒಮ್ಮಿಂದೊಮ್ಮೆ ಬಹಳ ಅಸ್ವಸ್ಥರಾದರು. ಆಗ ರಾವ್ ಬಹಾದ್ದೂರ ಎಣ್ಣೆಮಿಡಿ ವೆಂಕಟರಾಯರು, ಚಿಕ್ರಮನೆ ಭವಾನೀಶಂಕರರಾಯರು, ಬೈಂದೂರ ನಾರಾಯಣರಾಯರು ಮುಂತಾದ ಪ್ರಮುಖ ಜನರು ಗುರುಗಳಿದ್ದಲ್ಲಿಗೆ ಬಂದು ಶರಣು ಹೋಗಿ ಶಿಷ್ಯಸ್ವೀಕಾರ ವನ್ನು ಈಗಲಾದರೂ ಮಾಡಿಕೊಳ್ಳಬೇಕಾಗಿ ಅತಿ ದೈನ್ಯದಿಂದ ಬೇಡಿ ಕೊಂಡರು. ಆಗಲೂ ಗುರಗಳು ಕಬೂಲು ಮಾಡದೆ ಭಕ್ತವೃಂದದ ನಡತೆ ಯಲ್ಲಿ ತಮಗೆ ಸಮಾಧಾನವಿಲ್ಲದ್ದರಿಂದ ಶಿಷ್ಯನನ್ನು ಮಾಡುವದಿಲ್ಲ ಎಂದು ಖಂಡಿತವಾಗಿ ಹೇಳಿದರು. ಆಗ ಅವರೆಲ್ಲರೂ ದೇವರಲ್ಲಿಯೂ, ಹಿಂದಿನ ಎಲ್ಲ ಗುರುಗಳ ಸಮಾಧಿಗಳಲ್ಲಿಯೂ, ವಿಶೇಷವಾದ ಸೇವೆಗಳನ್ನು ಮಾಡಿ ಶ್ರೀ ಗುರುಗಳಿಗೆ ಶಿಷ್ಯನನ್ನು ಮಾಡಿಕೊಳ್ಳಲಿಕ್ಕೆ ದೇವರ ಪ್ರೇರಣೆ ಆಗ ಬೇಕಾಗಿ ಬಹಳ ರೀತಿಯಿಂದ ದೇವರನ್ನು ಬೇಡಿಕೊಂಡರು. ಇಷ್ಟಾದರೂ ಶ್ರೀ ಗುರುಗಳು ನಮ್ಮ ಪ್ರಾರ್ಥನೆಗೆ ಒಳಗಾಗಲಿಲ್ಲ. ಆಗ ಜನರು ಬಹಳ ನಿರಾಶರಾಗಿ ದುಃಖದಿಂದ ತಮ್ಮ ತಮ್ಮ ಮನೆಗೆ ಹಿಂತಿರುಗಿ ಹೋದರು. ಉಡುಪಿಯ ಬೈಂದೂರ ನಾರಾಯಣರಾಯರೊಬ್ಬರೇ ಶ್ರೀ ಗುರುಗಳ ಅಸ್ವ ಸ್ಥದ ಮೂಲಕ ಅಲ್ಲಿಯೇ ಉಳಕೊಂಡರು. ತರುವಾಯ ೨ ರಾತ್ರಿ ಗಳು ಕಳೆದವು. ೩ನೇ ರಾತ್ರೆ ಶ್ರೀ ಗುರುಗಳಿಗೆ ಸ್ವಪ್ನದಲ್ಲಿ ದೇವಪ್ರೇರಣೆ ಆಗಿ ಶಿಷ್ಯ ಸ್ವೀಕಾರಮಾಡು ಎಂತ ಹೇಳಿದ ಹಾಗೆ ಕಂಡು ಗುರುಗಳು ಅರೆನಿದ್ರೆಯಲ್ಲಿಯೇ ಸಮೀಪದಲ್ಲಿ ಇದ್ದ ಜನರನ್ನು ಕುರಿತು—"ಅಲ್ಲಿ ಯಾರು? ಬಂದವರಿಗೆ ಆಸನಕೊಟ್ಟು ಅರ್ಘ್ಯ ಸತ್ಕಾರ ಯಾಕೆ ಮಾಡುವ ದಿಲ್ಲ?" ಎಂದು ಕೇಳಿದರು. ಅಲ್ಲಿ ಬೈಂದೂರ ನಾರಾಯಣರಾಯರು,

ಹೆಮ್ಮಾಡಿ ವೀರಪ್ಪ ಹಾಗೂ ಇನ್ನು ಕೆಲವರು ಕಾವಲು ಮಾಡುತ್ತಲೇ ಕುಳಿತ್ತಿದ್ದರು. ಗುರುಗಳು ನಿದ್ರೆಯಲ್ಲಿ ಮಾತಾಡಿದ್ದನ್ನು ಕೇಳಿ ಹೆಮ್ಮಾಡಿ ವೀರಪ್ಪನವರು—"ಇಲ್ಲಿ ಯಾರೂ ಬರಲಿಲ್ಲ ಸ್ವಾಮಿ, ರಾತ್ರೆ ಇನ್ನೂ ಬಹಳ ಅದೆ, ಗುರುಗಳು ನಿದ್ರೆಮಾಡಬಹುದು" ಎಂದು ಹೇಳಿದರು. ಗುರುಗಳು ಪುನಃ ಸುಮಾರು ೪ ಘಂಟೆಗೆ ಎದ್ದು—"ಇನ್ನೂ ಅವರಿಗೆ ಸತ್ಕಾರ ಮಾಡಲಿಲ್ಲವೊ? ಅವರು ಎಷ್ಟು ಹೊತ್ತು ನಿಲ್ಲಬೇಕು?" ಎಂತ ಅಲ್ಲಿ ಕೂತಿದ್ದ ಜನರನ್ನು ಗದರಿಸಿದರು. ಹಾಗೂ ತಟ್ಟನೆ ಎದ್ದು ಕೂತುಕೊಂಡು ವೇದಮೂರ್ತಿ ಸುಬ್ರಾಯ ಭಟ್ಟರನ್ನೂ, ಶುಕ್ಲ ಮಂಗೇಶ ಭಟ್ಟರನ್ನೂ, ಹರಿದಾಸ ರಾಮಚಂದ್ರ ಭಟ್ಟರನ್ನೂ, ಸಮೀಪದಲ್ಲಿ ಕರೆಸಿಕೊಂಡು—"ಸುಬ್ರಾಯಾ, ಶಿಷ್ಯನನ್ನು ಮಾಡಿಕೊಳ್ಳಬೇಕೆಂದು ನೀವು ಹೇಳುತ್ತಿದ್ದಿರಿ, ಹಾಗೆ ಮಾಡುವ ಕುರಿತು ನಮಗೆ ದೇವರ ಪ್ರೇರಣೆಯು ಆಗಿದೆ. ಆದ್ದರಿಂದ ಅದರ ಸಿದ್ಧತೆ ತ್ವರ್ಯ ಮಾಡು" ಎಂತ ಅಪ್ಪಣೆ ಮಾಡಿದರು. ಅದನ್ನು ಕೇಳಿ ಸುಬ್ರಾಯ ಭಟ್ಟರು ಹರ್ಷಿತರಾಗಿ "ಸ್ವಾಮಿನ್,—ಸನ್ನಿಧಿಯ ಈ ನಿಶ್ಚಯದ ಬಗ್ಯೆ ನಾವು ಸನ್ನಿಧಿಯ ಹಾಗೂ ಭವಾನೀಶಂಕರ ದೇವರ ಆಭಾರಿ ಇದ್ದೇವೆ. ಯಾರನ್ನು ಶಿಷ್ಯನನ್ನಾಗಿ ಮಾಡುವ ಗುರುಗಳ ವಿಚಾರ ಇರುತ್ತದೆಂಬುದು ನಮಗೆ ತಿಳಿಯಲಿಲ್ಲ," ಎಂದು ಅಂದರು. ಅದಕ್ಕೆ ಗುರುಗಳು ಶುಕ್ಲ ಮಂಗೇಶ ಭಟ್ಟರಿಗೆ ಕರೆದು—"ಮಂಗೇಶಾ ನಿನಗೆ ೩ ಹುಡುಗರಿದ್ದಾರೆ, ಒಬ್ಬನಿಗೆ ಶಿಷ್ಯನಾಗಲಿಕ್ಕೆ ನಮಗೆ ಕೊಡು" ಎಂತ ಅಂದರು. ಅದಕ್ಕೆ ಮಂಗೇಶ ಭಟ್ಟರು—ಸ್ವಾಮಿನ್, ನನ್ನ ಹುಡುಗರಲ್ಲಿ ಯಾರಿಗೂ ಕೊಡಲಿಕ್ಕೆ ನಮಗೆ ಸಾಧ್ಯವಿಲ್ಲ" ಎಂದರು. ಇನ್ನೊಮ್ಮೆ ವಿಚಾರಮಾಡು ಎಂದು ಗುರುಗಳು ಹೇಳಿದರು. ಆ ಮೇಲೂ ಮಂಗೇಶ ಭಟ್ಟರು ಹಿಂದಿನದೇ ಉತ್ತರ ಕೊಟ್ಟರು. ಆಗ ಹರಿದಾಸ ರಾಮಚಂದ್ರ ಭಟ್ಟರಿಗೆ ಅವರ ೨ನೇ ಮಗ ಶಾಂತಮೂರ್ತಿಯನ್ನು ಕೊಡಲಿಕ್ಕೆ ಗುರುಗಳು ಹೇಳಿದರು. ಆಗ ಸುಬ್ರಾಯ ಭಟ್ಟರು ರಾಮಚಂದ್ರ ಭಟ್ಟರಿಗೆ ಕಬೂಲಿ ಮಾಡಲಿಕ್ಕೆ ಸನ್ನೆ ಮಾಡಿದ್ದರಿಂದ ರಾಮಚಂದ್ರ ಭಟ್ಟರು ತನ್ನ ಮಗನನ್ನು ಕೊಡಲಿಕ್ಕೆ ಕಬೂಲಿ ಕೊಟ್ಟರು. ಆಗ ಶ್ರೀ ಗುರುಗಳು ರಾಮಚಂದ್ರ ಭಟ್ಟರಿಗೆ ಅವರ ಮನೆಗೆ ಹೋಗಿ ಅವರ ಹೆಂಡತಿಗೆ (ಶುಕ್ಲ ಮಂಗೇಶ ಭಟ್ಟರ ತಂಗಿ) ವಿಚಾರಿಸಿ ಬರಲಿಕ್ಕೆ ಹೇಳಿದರು. ಆ ಪ್ರಕಾರ ರಾಮಚಂದ್ರ ಭಟ್ಟರು ಮನೆಗೆ ಹೋಗಿ

ಹೆಂಡತಿಯನ್ನು ವಿಚಾರಿಸಿದರು. ಹೆಂಡತಿಯು ಅದನ್ನು ಕೇಳಿ ಸ್ವಲ್ಪಹೊತ್ತು ವಿಚಾರ ಮಾಡಿ—"ಗುರುಗಳ ಇಚ್ಛೆ ಹಾಗಿದ್ದರೆ ನಾವು ಅದನ್ನು ಅಲ್ಲಗಳೆಯ ಲಿಕ್ಕೆ ಹೇಗಾದೀತು? ದೇವರ ಇಚ್ಛೆ ಇದ್ದಂತೆ ಆಗಲಿ" ಎಂದು ಹೇಳಿದಳು.

ಈಗ ಮುಖ್ಯವಾದ ಸಂಗತಿ ಉಳಿದದ್ದು ಏನಂದರೆ—ಶಾಂತಮೂರ್ತಿ ಹುಡುಗನು ಕಬೂಲಿದ್ದಾನೋ ಏನೆಂಬ ವಿಚಾರ. ಆ ಬಗ್ಗೆ ಸುಬ್ರಾಯ ಭಟ್ಟರು ಹಾಗೂ ಬೇರೆ ಕೆಲವು ಗೃಹಸ್ಥರು ಅವನನ್ನು ಹುಡುಕಲಿಕ್ಕೆ ಹೋದರು. ಯಾಕಂದರೆ ಅವನಿಗೆ ಈ ಸಂಗತಿ ತಿಳಿದಿದ್ದಿಲ್ಲ. ಅವನು ನಿತ್ಯದಂತೆ ದೇವರ ಪೂಜೆ ಬಗ್ಯೆ ಹೂ, ತುಲಸಿ ಮುಂತಾದ್ದನ್ನು ತರಲಿಕ್ಕೆ ಹೋಗಿದ್ದನು. ಅವನು ಗೋಪಾಲಕೃಷ್ಣ ದೇವಸ್ಥಾನದಲ್ಲಿ ಹೂ, ತುಲಸಿ ಗಳನ್ನು ತಂದು ಅವನ್ನು ವಿಂಗಡಿಸುತ್ತ ಕುಳಿತ್ತಿದ್ದಾನೆಂತ ತಿಳಿಯಿತು. ಸುಬ್ರಾಯ ಭಟ್ಟರು ಅಲ್ಲಿ ಹೋಗಿ ಅವನನ್ನು ಕಂಡು—"ನಮ್ಮ ಶ್ರೀ ಗುರು ಸ್ವಾಮಿಗಳು ಈಗ ಶಿಷ್ಯಸ್ವೀಕಾರ ಮಾಡುವದು ನಿಶ್ಚಯ ಮಾಡಿದುದರಿಂದ ನಮಗೆ ಬಹಳ ಸಂತೋಷವಾಗಿದೆ" ಎಂದು ಹೇಳಿದರು. ಆಗ ಶಾಂತ ಮೂರ್ತಿಯು ಸುಬ್ರಾಯ ಭಟ್ಟರನ್ನು ಕುರಿತು—"ಯಾರನ್ನು ಶಿಷ್ಯನಾಗಿ ಮಾಡಬೇಕೆಂತ ಮಾಡಿದ್ದಾರೆ, ಮಂಗೇಶ ಮಾವನವರ ಹುಡುಗರಲ್ಲಿ ಒಬ್ಬನು ಇರಬೇಕೆಂದು ನನಗೆ ತೋರುತ್ತದೆ ಅಲ್ಲವೋ? ಎಂದು ಅಂದನು. ಅದಕ್ಕೆ ಸುಬ್ರಾಯ ಭಟ್ಟರು—"ನಿನ್ನ ಮಾವನು ತನ್ನ ಹುಡುಗರಲ್ಲಿ ಯಾರನ್ನೂ ಕೊಡಲಿಕ್ಕೆ ಕಬೂಲು ಮಾಡಲಿಲ್ಲ. ಆದುದರಿಂದ ಶ್ರೀ ಸ್ವಾಮಿ ಗಳು ನಿನ್ನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಬೇಕೆಂಬದಾಗಿ ಹೇಳಿದ್ದಾರೆ" ಎಂದು ನುಡಿದರು. ಅದಕ್ಕೆ ಶಾಂತಮೂರ್ತಿಯು—"ಶ್ರೀ ಗುರುಗಳು ನನ್ನನ್ನೇ ಆರಿಸಿದರೋ, ಅವರು ಹಾಗೆ ಸ್ಪಷ್ಟವಾಗಿ ಅಂದರೋ" ಹೀಗೆ ಅಂದು ತನ್ನ ಕೈಯಲ್ಲಿದ್ದ ಕೆಲಸವನ್ನು ಹಾಗೆಯೇ ಬದಿಗಿಟ್ಟುಕೊಂಡು, ಶಾಂತ ಮುದ್ರೆಯಿಂದ ಕೆಲ ಹೊತ್ತು ವಿಚಾರ ಮಾಡಿ ಕಟ್ಟಕಡೆಗೆ ಹೇಳಿದ್ದೇನೆಂದರೆ—"ಶ್ರೀ ಗುರು ಸ್ವಾಮಿಗಳು ನನ್ನನ್ನೇ ಆರಿಸಿದ್ದರೆ ಮತ್ತು ಹಾಗೆ ಆಗುವದು ದೇವರ ಇಚ್ಛೆ ಇದ್ದರೆ ಅದಕ್ಕೆ ಸಮ್ಮತಿ ಇಲ್ಲ ಎಂತ ಯಾರಿಂದ ಹೇಳಲಿಕ್ಕಾಗುವದು?"—ಇದನ್ನು ಕೇಳಿ ಸುಬ್ರಾಯ ಭಟ್ಟರಿಗೆ ಹಾಗೂ ಅವರ ಸಂಗಡ ಹೋದ ಎಲ್ಲ ಜನರಿಗೆ ಬಹಳ ಆನಂದವಾಯಿತು. ಕೂಡಲೆ ಅವರು ಅವಸರದಿಂದ ಗುರುಸನ್ನಿಧಿಯಲ್ಲಿ ಹೋಗಿ ನಡೆದ

ವೃತ್ತಾಂತವನ್ನು ನಿರೂಪಿಸಿದರು. ಆಗ ಶ್ರೀ ಗುರುಗಳು ಸುಬ್ರಾಯ ಭಟ್ಟ ರನ್ನು ಕುರಿತು—"ಹಾಗಾದರೆ ಈಗಲೇ ಶಿಷ್ಯಸ್ವೀಕಾರದ ಸಿದ್ಧತೆ ಮಾಡು" ಎಂತ ಅಪ್ಪಣೆ ಮಾಡಿದರು. ಈ ಹೊತ್ತು ಮುಹೂರ್ತ ಚಲೋದಿಲ್ಲ ಎಂದು ಸುಬ್ರಾಯ ಭಟ್ಟರು ಸ್ವಲ್ಪ ಆಕ್ಷೇಪ ತೆಗೆದರೂ, ಅದಕ್ಕೆ ಶ್ರೀ ಸ್ವಾಮಿ ಗಳು—"ಸುಬ್ರಾಯಾ, ಈ ನಮ್ಮ ದೇಹದ ಭರವಸೆ ನೀನು ಕೊಡು ವಿಯಾ? ಅದೇನಿಲ್ಲ, ಶಿಷ್ಯಸ್ವೀಕಾರದ ಸಿದ್ಧತೆ ಈ ಹೊತ್ತೇ, ಈಗಲೇ ಆಗಲಿ. ಕಡೆಯ ವಿಧಾನವು ಮುಂದೆ ಶುಭದಿನ ನೋಡಿ ಮಾಡಬಹುದು" ಎಂದು ಸ್ವಾಮಿಗಳ ಅಪ್ಪಣೆ ಆಯಿತು. ಕೂಡಲೆ ಸುಬ್ರಾಯ ಭಟ್ಟರು ಮಠದ ಪರಿವಾರದ ಜನರನ್ನೂ, ಅಲ್ಲಿ ನೆರೆದ ಜನರನ್ನೂ, ಚಿತ್ರಾಪುರದ ಎಲ್ಲ ಜನರನ್ನೂ ಕೂಡಿಸಿ ವಾದ್ಯ ಮುಂತಾದ ಸಂಭ್ರಮದೊಡನೆ ಪಲ್ಲಕ್ಕಿಯನ್ನು ತಕ್ಕೊಂಡು ಗೋಪಾಲಕೃಷ್ಣ ದೇವಸ್ಥಾನಕ್ಕೆ ಹೋದರು. ಮತ್ತು ನಿಶ್ಚಿತ ಶಿಷ್ಯ ಶಾಂತಮೂರ್ತಿಯನ್ನು ಬರಮಾಡಿಕೊಂಡು ಅವನನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿ ಮಠಕ್ಕೆ ಕರಕೊಂಡು ಬಂದರು. ತರುವಾಯ ಶಿಷ್ಯಸ್ವೀಕಾರದ ಕಾರ್ಯಗಳು ಪ್ರಾರಂಭ ಮಾಡಲ್ಪಟ್ಟವು. ಶಿಷ್ಯರಾಗುವ ಹುಡುಗರಿಗೆ ಶಿಷ್ಯಸ್ವೀಕಾರ ಆಗುವ ಮೊದಲು ಅವರ ಸಂಬಂಧಿಕರೂ, ಸ್ನೇಹಿತರೂ ಅವರನ್ನು ತಮ್ಮ ತಮ್ಮ ಮನೆಗಳಲ್ಲಿ ಕರಿಸಿಕೊಂಡು ಅವರಿಗೆ ಪಂಚಭಕ್ಷ್ಯ ಪಕ್ವಾನ್ನ ಮಾಡಿ ಉಣ್ಣಿಸುವ ರೂಢಿಯು ಹಿಂದಿನ ಕಾಲದಿಂದ ವಾಡಿಕೆ ಯಾಗಿತ್ತು. ಅದು ಈ ಸಾರೆ ಈ ಶಾಂತಮೂರ್ತಿ ರಾಯರಿಗೆ ತಪ್ಪಿತು. ಯಾಕಂದರೆ—ಗುರುಗಳು ಅಸ್ವಸ್ಥರಿದ್ದ ಮೂಲಕ ಶಿಷ್ಯಸ್ವೀಕಾರವು ಬಹಳ ತ್ವರೆಯಿಂದ ಆಗತಕ್ಕದ್ದಿತ್ತು. ಇರಲಿ—ಶಿಷ್ಯಸ್ವೀಕಾರದ ಸಿದ್ಧತೆಯಲ್ಲಿ ಒಂದು ವಿಚಿತ್ರ ಸಂಗತಿ ಘಟಿಸಿತು. ಹೊಸ ಸ್ವಾಮಿಗಳಿಗೆ ಹೊಸ ದಂಡವು ಬೇಕಾಗಿತ್ತು. ದಂಡವೆಂದರೆ ಅದು ಸಾಮಾನ್ಯ ಕಾಷ್ಟವಲ್ಲ. ಗಳುವಿನ ಜಾತಿಯಲ್ಲಿ ಒಂದು ವಿಶಿಷ್ಟ ತರದ್ದು. ಸನ್ಯಾಸಿಗಳು ಉಪಯೋಗಿಸು ವಂಥಾದ್ದು ಇರುತ್ತದೆ. ಅಂಥಾ ದಂಡವು ಈಗಲೇ ಎಲ್ಲಿ ಸಿಗಬಹುದೆಂಬ ಚಿಂತೆಯು ಸುಬ್ರಾಯ ಭಟ್ಟರಿಗೆ ಆಯಿತು. ಆಗ ಗುರುಗಳಿಗೆ ಫಕ್ಕನೆ ನೆನಪಾಯಿತು, ಏನೆಂದರೆ—ಅವರ ಸ್ವತಃ ಶಿಷ್ಯಸ್ವೀಕಾರ ಆಗುವ ಕಾಲಕ್ಕೆ ೨ ದಂಡಗಳು ತರಿಸಿದ್ದರಂತೆ. ಅವುಗಳಲ್ಲಿ ಒಂದನ್ನು ಉಪಯೋಗಿಸಿ ಇನ್ನೊಂದನ್ನು ಅಡಿಗೆ ಮನೆಯಲ್ಲಿ ಹುಳ ಹತ್ತಬಾರದೆಂದು ತೂಗಹಾಕಿ

ಇಟ್ಟಿದ್ದರಂತೆ. ಅಂದಿನಿಂದ ಅದು ಇಷ್ಟು ವರುಷಗಳ ವರೆಗೂ ಯಾರ ದೃಷ್ಟಿಗೂ ಬೀಳದೆ ಅಲ್ಲಿಯೇ ಇದ್ದಕ್ಕಿದ್ದ ಹಾಗೆ ಇತ್ತು. ಅಲ್ಲಿ ಹೋಗಿ ನೋಡಲು ಅದನ್ನು ಕಟ್ಟಿದ ಹುರಿಯು ಸಡಿಲಾಗಿ ಅದು ಬೀಳುವ ಸ್ಥಿತಿ ಯಲ್ಲಿತ್ತು. ಆಗ ಅದನ್ನು ತರಿಸಿಕೊಂಡು ಶಿಷ್ಯಸ್ವೀಕಾರದ ಮುಂದಿನ ಕ್ರಮಗಳು ನಡಿಸಲ್ಪಟ್ಟವು. ಈ ರೀತಿಯಾಗಿ ಬಹಳ ಮಾಡಿ ಎಲ್ಲ ವಿಧಾನ ಗಳು ಮುಗಿದು ಶಿಷ್ಯಸ್ವಾಮಿಗೆ ಉಪದೇಶ ಕೊಟ್ಟು ಶಿಷ್ಯಸ್ವೀಕಾರ ಮಾಡುವ ಸಮಾರಂಭದ ಕಡೆಯ ಒಂದು ವಿಧಾನವು ಶುಭ ಮುಹೂರ್ತದಲ್ಲಿ ಆಗತಕ್ಕ ದ್ದಿರುವುದರಿಂದ ಅದನ್ನು ರಾಕ್ಷಸ ಸಂವತ್ಸರದ ವೈಶಾಖ ಬ. ೮ ದಿವಸ (೧೯೧೫ನೇ ಇಸವಿ) ಮಾಡುವದೆಂದು ನಿಶ್ಚಯಿಸಿದರು. ಹಾಗೂ ಆ ದಿವಸ ಬರಲಿಕ್ಕೆ ನಮ್ಮ ಜನರಿಗೆಲ್ಲ ತಂತಿ ಮೂಲಕ ತಿಳಿಸಿ ಅವರನ್ನು ಬರಮಾಡಿ ಕೊಂಡರು. ಈ ಶಿಷ್ಯಸ್ವೀಕಾರದ ಕಡೆಯ ಸಮಾರಂಭವು ಬಹಳ ಮನೋ ವೇಧಕವಾಗಿತ್ತು. ಶ್ರೀ ಗುರುಗಳು ಶಿಷ್ಯಸ್ವಾಮಿಗೆ ಆ ದಿವಸ **ಆನಂದಾಶ್ರಮ** ಎಂಬ ಅಬಿಧಾನವನ್ನು ಕೊಟ್ಟು ಶ್ರೀ ಭವಾನೀಶಂಕರ ದೇವರಲ್ಲಿ ಹೋಗಿ ವಿಶೇಷವಾದ ಪ್ರಾರ್ಥನೆ ಮಾಡಿ, ಆ ಮೇಲೆ ಶಿಷ್ಯಸ್ವಾಮಿಯ ಮಸ್ತಕದ ಮೇಲೆ ತಮ್ಮ ವರದ ಹಸ್ತವನ್ನು ಇಟ್ಟು ಉಪದೇಶ ಮಾಡಿದ್ದೇನೆಂದರೆ— "ನೀನು ಇಷ್ಟು ದಿವಸ ನಿನ್ನ ತಂದೆ ತಾಯಿಗಳ ಮಗನಾಗಿದ್ದಿ— ಈಗ ಶ್ರೀ ಭವಾನೀಶಂಕರ ದೇವರೇ ನಿನ್ನ ತಾಯಿ, ತಂದೆ, ಅಣ್ಣ, ತಮ್ಮ, ಸ್ನೇಹಿತ ಎಂದು ತಿಳಕೊ. ದೇವರಲ್ಲಿ ಪೂರ್ಣ ವಿಶ್ವಾಸವಿಟ್ಟು ನಿನ್ನ ಕರ್ತವ್ಯ ಕರ್ಮವನ್ನು ದಕ್ಷತೆಯಿಂದ ಮಾಡು. ನಿನ್ನ ಮನಸ್ಸಿಗೆ ಖಾತ್ರಿಯಾಗಿ ಯೋಗ್ಯ ಕಂಡದ್ದು ಮಾಡುವದರಲ್ಲಿ ಯಾವ ಕಾರಣದಿಂದಲೂ ತಿಲ ಮಾತ್ರವೂ ಹಿಂಜರಿಯ ಬೇಡ. ಶ್ರೀಮಂತಿಕೆ, ದೊಡ್ಡ ಪದವಿ ಮುಂತಾದ್ದು ಯಾವದೂ ನೋಡದೆ ಎಲ್ಲರಲ್ಲಿಯೂ ಸಮಾನ ದೃಷ್ಟಿಯಿಂದಲೂ, ನಿಷ್ಪಕ್ಷ ಪಾತದಿಂದಲೂ ನಡೆ. ಧರ್ಮದಂತೆ ನ್ಯಾಯವನ್ನು ಮಾಡು. ಶ್ರೀ ಭವಾನೀ ಶಂಕರ ದೇವರು ನಿನ್ನ ಬಲಗಡೆಗೆ, ನಿನ್ನ ಹಿಂದಿನ ಎಲ್ಲ ಗುರುಗಳು ನಿನ್ನ ಎಡಬದಿಗೆ ನಿನ್ನ ಸಹಾಯಕ್ಕೆ ಇದ್ದು ನಿನ್ನನ್ನು ನಡಿಸಿಕೊಂಡು ಹೋಗಲಿಕ್ಕೆ ಯಾವಾಗಲೂ ಸಿದ್ಧರಿದ್ದಾರೆ ಎಂತ ದೃಢವಿಶ್ವಾಸ ಇಡು. ಸತ್ಯ ಒಂದೇ ನಿನ್ನ ಮಾರ್ಗದರ್ಶಕವಾಗಿರಲಿ."

ಇಲ್ಲಿಗೆ ಶಿಷ್ಯ ಸ್ವೀಕಾರದ ಸಮಾರಂಭವು ಸಮಾಪ್ತವಾಯಿತು. ಇದನ್ನೆಲ್ಲ ಅಲ್ಲಿ ನೆರೆದ ಜನರು ಕಣ್ಣುತುಂಬ ನೋಡಿದರು. ಅವರಿಗೆ

ಸ್ವೀಕಾರವಾದ ಬಗ್ಯೆ ಹರ್ಷೋದ್ಗಾರವೂ ಶ್ರೀ ಗುರುಸ್ವಾಮಿಗಳ ಅಸ್ವಸ್ಥತೆ ಬಗ್ಯೆ ದುಃಖವೂ ಆಗಿ ಎಲ್ಲರ ಕಣ್ಣಿನಲ್ಲಿ ನೀರು ತುಂಬಿತು. ಶ್ರೀ ಗುರುಗಳ ಅಸ್ವಸ್ಥವು ದಿನೇ ದಿನೇ ಹೆಚ್ಚುತ್ತ ಹೋಗಿ ಶಿಷ್ಯ ಸ್ವೀಕಾರವಾದ ೮ ದಿವಸ ಗಳಲ್ಲಿಯೇ, ಜ್ಯೇಷ್ಠ ಶು| ೨ ದಿವಸ ಸಂಜೆ ೬ ಘಂಟೆಗೆ (೧೯೧೫ ರಲ್ಲಿ) ಗುರುಗಳು ದೇಹ ವಿಸರ್ಜನೆ ಮಾಡಿದರು. ಈ ದುಃಖದ ವಾರ್ತೆಯು ಸಮೀಪದ ಭಟ್ಕಳ, ಬೈಂದೂರು, ಮುರ್ಡೇಶ್ವರ ಊರುಗಳಲ್ಲಿ ತಕ್ಷಣವೇ ಮುಟ್ಟಿ, ಅಲ್ಲಿಯ ಜನರೆಲ್ಲರು ಒಂದು ತಾಸಿನೊಳಗೇ ಗುಂಪು ಗುಂಪಾಗಿ ಬಂದು ಕೂಡಿದರು. ದೇಹವನ್ನು ಆರಾಮ ಖುರ್ಚಿಯ ಮೇಲೆ ಇಟ್ಟು ಊರಸುತ್ತಲೂ ಮೆರವಣಿಗೆ ಮಾಡಿದರು. ಮೆರವಣಿಗೆಯು ರಾತ್ರೆ ೧೦ ಘಂಟೆಗೆ ಪ್ರಾರಂಭವಾಗಿ ಊರಲ್ಲಿಯ ಜನರ ಬಾಗಿಲ ಮುಂದೆ ಆರತಿ ಕೊಳ್ಳುತ್ತಾ ೨ ಘಂಟೆ ಸುಮಾರಕ್ಕೆ ಮೆರವಣಿಗೆಯು ಮಠಕ್ಕೆ ತಿರಿಗಿಬಂತು. ಅಷ್ಟರೊಳಗೆ ಮಠದಲ್ಲಿ ಗುರುಗಳ ಸಮಾಧಿ ಬಗ್ಯೆ ಗಣಪತಿ ದೇವರ ಬಲ ಬದಿಗೆ ಕುಣಿಯನ್ನು ಆಗಿಸಿ ಎಲ್ಲ ಸಿದ್ಧತೆ ಮಾಡಿದರು. ಮೆರವಣಿಗೆ ಆಗಿ ತಿರಿಗಿ ಬಂದ ಕೂಡಲೆ ಆ ಪವಿತ್ರವಾದ ದೇಹವನ್ನು ಪದ್ಮಾಸನದಿಂದ ಕೂಡ್ರುವ ರೀತಿಯಲ್ಲಿ ಕುಣಿಯಲ್ಲಿ ಇಟ್ಟು ಗಂಧ ಕರ್ಪೂರಾಧಿ ಸುಗಂಧ ದ್ರವ್ಯಗಳನ್ನು ಹಾಕಿ ಮಸ್ತಕದ ಮೇಲೆ ಒಂದು ಶಾಲಿಗ್ರಾಮವನ್ನೂ ಇಟ್ಟು ಆ ಸಂಬಂಧದ ವಿಧಾನಗಳು ಪೂರ್ಣತೆ ಹೊಂದಿದವು. ಈ ರೀತಿಯಾಗಿ ಶ್ರೀ ಗುರುಸ್ವಾಮಿಗಳ ಪರಿಶುದ್ಧವಾದ ಜೀವನ ಯಾತ್ರೆಯು ಅಂತ್ಯವಾಯಿತು.

---

## ಅಧ್ಯಾಯ ೯

## ೯ನೇ ಗುರುಗಳು— ಶ್ರೀಮದಾನಂದಾಶ್ರಮ ಸ್ವಾಮಿಗಳು

ಇವರು ಸನ್ ೧೯೦೨ನೇ ಇಸವಿಯಲ್ಲಿ ಶುಭಕೃತು ಸಂವತ್ಸರದ ಜ್ಯೇಷ್ಠ ಬ| ೮ ದಿವಸ ಜನ್ಮವೆತ್ತಿದರು. ಇವರ ಪೂರ್ವಾಶ್ರಮದ ಹೆಸರು ನಮ್ಮ ಹಳೇ ಪದ್ಧತಿಯಂತೆ ಅಜ್ಜನ ಹೆಸರಾದ ಶಾಂತಮೂರ್ತಿ ಎಂಬದಾಗಿ ಇತ್ತು. ಇವರ ಸ್ವಭಾವಕ್ಕೆ ತಕ್ಕ ಆ ಹೆಸರು ಚಲೋ ಒಪ್ಪುತ್ತಿತ್ತು. ಇವರ ಕನ್ನಡ ಅಭ್ಯಾಸವು ಶಿರಾಲಿಯ ಕನ್ನಡ ಶಾಲೆಯಲ್ಲಿ ಆಯಿತು. ಇವರ ಮನಸ್ಸು

ಚಿಕ್ಕಂದಿನಿಂದ ಧರ್ಮ ಸಂಬಂಧದ ಕಡೆಗೇನೇ ಹೆಚ್ಚಿಗೆ ಒಲಿಯುತ್ತಿತ್ತು. ಈ ಧರ್ಮ ಜ್ಞಾನವು ಇವರಿಗೆ ಮನೆಯಲ್ಲಿಯೇ ಇವರ ತಂದೆಯವರ ಕಡೆಯಿಂದ ಕೆಲಮಟ್ಟಿಗೆ ಸಿಕ್ಕಿತು. ಇವರು ಬಹು ಮುಂಜಾನೆ ಎದ್ದು ಅವರ ಮನೆಯ ಶ್ರೀ ಗೋಪಾಲಕೃಷ್ಣ ದೇವರ ಪೂಜೆಗೆ ಬೇಕಾದ ಹೂ, ಪತ್ರಿ, ತುಳಸಿ ಮುಂತಾದ್ದನ್ನು ತರಲಿಕ್ಕೆ ಹೋಗುತ್ತಿದ್ದರು. ಇವರ ೮ನೇ ವರ್ಷದ ಪ್ರಾಯದಲ್ಲಿ ಇವರಿಗೆ ಉಪನಯನವಾಯಿತು. ಇವರಿಗೆ ಅವರ ದೇವಸ್ಥಾನದಲ್ಲಿ ಪೂಜೆ ಮಾಡುವದರ ಮೇಲೆ ಬಹು ಶ್ರದ್ಧೆ. ಇವರ ಮನೆಯಲ್ಲಿ ಆಗುವ ಕೃಷ್ಣಜಯಂತಿ ಉತ್ಸವ ಕಾಲಕ್ಕೆ ಇವರ ತಂದೆಯವರ ಸಂಗಡಲೇ ಇವರು ದಿನಾಲೂ ತಪ್ಪದೆ ಭಜನೆ ಮಾಡುತ್ತಿದ್ದರು. ಈಗಲಾದರೂ ಸಹ ಅವಕಾಶ ಸಿಕ್ಕಿದರೆ ಇವರು ಗೋಪಾಲಕೃಷ್ಣ ದೇವಸ್ಥಾನದಲ್ಲಿ ಈ ಜಯಂತಿ ಉತ್ಸವಕ್ಕೆ ಹೋಗುತ್ತಿರುತ್ತಾರೆ. ಇವರಿಗೆ ಶಿಷ್ಯ ಸ್ವೀಕಾರವಾದ ನಂತರ ಗುರುಗಳಿಂದ ಸಿಗಬೇಕಾದ ಧರ್ಮ ಸಂಬಂಧಿ ಅಧ್ಯಯನವು ಗುರುಗಳಿಂದ ಸಿಗಲಿಕ್ಕೆ ಸಾಧ್ಯವಾಗದೆ ಹೋಯಿತು. ಹೀಗಾಗಿ ಅದನ್ನು ಸಂಪಾದಿಸುವ ಕುರಿತು ಇವರು ಬಹಳ ಆತುರಪಟ್ಟು ಮಠದಲ್ಲಿ ಇದ್ದ ಕ್ಯಾಕಿಣಿ ಸುಬ್ರಾಯ ಭಟ್ಟರ ಕಡೆಯಿಂದ ಸಂಸ್ಕೃತ, ವ್ಯಾಕರಣ, ಕಾವ್ಯ, ತರ್ಕಶಾಸ್ತ್ರ ಮೊದಲಾದ ವಿಷಯಗಳ ಅಭ್ಯಾಸಮಾಡಿ ಸಕಲ ವಿದ್ಯೆಯಲ್ಲಿ ಬಹು ಬೇಗನೇ ಪ್ರವೀಣರಾದರು. ಇವರು ಒಮ್ಮೆ ಗೋಕರ್ಣಕ್ಕೆ ಹೋದಾಗ ಅಲ್ಲಿ ಋಷಿಕೇಶದಿಂದ ಬಂದಿದ್ದ ಕೃಷ್ಣಾಚಾರ್ಯ ಎಂಬ ಸ್ವಾಮಿಗಳನ್ನು ಕಂಡು ಅವರ ವಿದ್ವತ್ತಿಕೆ ನೋಡಿ ಅವರ ಕಡೆಯಿಂದ ಕೆಲವು ಅಭ್ಯಾಸ ಮಾಡಿಕೊಳ್ಳಬೇಕಾಗಿ ಮನಸ್ಸು ಮಾಡಿದರು. ಆ ಮೇಲೆ ಕೃಷ್ಣಾಚಾರ್ಯರು ಋಷಿಕೇಶಕ್ಕೆ ತಿರಿಗಿ ಹೋದ ಮೇಲೆ ನಮ್ಮ ಗುರುಗಳು ಋಷಿಕೇಶಕ್ಕೆ ಪ್ರಯಾಣಮಾಡಿ ಶ್ರೀ ಶಂಕರಾಚಾರ್ಯರ ಬ್ರಹ್ಮಸೂತ್ರ ಭಾಷ್ಯವನ್ನು ಕೃಷ್ಣಾಚಾರ್ಯರ ಕಡೆಯಿಂದ ಓದಿಸಿಕೊಂಡರು. ಋಷಿಕೇಶಕ್ಕೆ ಹೋಗುವಾಗ ದಾರಿಯಲ್ಲಿ ಮುಂಬಯಿ, ಪುಣೆ, ದಿಲ್ಲಿ ಮುಂತಾದ ದೊಡ್ಡ ಪಟ್ಟಣಗಳನ್ನೂ, ಪವಿತ್ರ ಸ್ಥಳಗಳನ್ನೂ, ನೋಡಿ ಈ ರೀತಿಯಿಂದ ಆಗುವ ದೇಶಸಂಚಾರದ ಜ್ಞಾನವನ್ನು ಸಂಪಾದಿಸಿಕೊಂಡರು. ಋಷಿಕೇಶದಲ್ಲಿದ್ದ ದಿವಸಗಳಲ್ಲಿ ಸೂತ್ರಭಾಷ್ಯದ ಅಭ್ಯಾಸವು ಪೂರ್ಣ ಆಗದ್ದರಿಂದ ಕೃಷ್ಣಾಚಾರ್ಯರನ್ನೇ ಚಿತ್ರಾಪುರಕ್ಕೆ ಬರಮಾಡಿಕೊಂಡು ಭಾಷ್ಯದ

ಅಭ್ಯಾಸವನ್ನು ಪೂರ್ಣಗೊಳಿಸಿದರು. ಕೃಷ್ಣಾಚಾರ್ಯರು ಈ ಗುರು ಸ್ವಾಮಿಗಳ ಅಗಾಧ ಜ್ಞಾನವನ್ನೂ, ಮಿಗಿಲಾದ ಬುದ್ಧಿ ಸಾಮರ್ಥ್ಯವನ್ನೂ, ಮೇಲ್ತರವ ಗ್ರಹಶಕ್ತಿಯನ್ನೂ ನೋಡಿ ಬಹಳ ಸಂತೋಷಪಟ್ಟರು.

ಇವರು ಕನ್ನಡ, ಮರಾಠಿ, ಸಂಸ್ಕೃತ, ಹಿಂದೀ, ಇಂಗ್ಲಿಷ್ ಮೊದ ಲಾದ ಬಹು ಭಾಷಾಭಿಜ್ಞರಿರುವರು. ಇವರು ಪ್ರವಚನ ಕೊಡುವದ ರಲ್ಲಿ ಬಹಳ ಪ್ರವೀಣರು ಹಾಗೂ ವಾಕ್ಚಾತುರರೂ ಇರುವರು. ಇವರು ನಮ್ಮ ಜನರಲ್ಲಿ ಸಂಚಾರಕ್ಕೆ ಬಂದಾಗ ಧರ್ಮ ಸಂಬಂಧಿ ಪಾರಮಾರ್ಥ ವಿಷಯವನ್ನು ಕುರಿತು ಅತ್ಯಂತ ಸುರಸವಾದ ಹಾಗೂ ಬೋಧಪರ ಪ್ರವಚನಗಳನ್ನು ಕೊಡುತ್ತಿರುವರು. ಇದನ್ನು ಕೇಳಿ ನಮ್ಮ ಮನಸ್ಸಿಗೆ ಬಹಳ ಉಲ್ಲಾಸವಾಗುವದು. ಇಂಥ ಗುರುಗಳು ನಮಗೆ ಪ್ರಾಪ್ತ ವಾದದ್ದು ನಮ್ಮ ಪರಮ ಭಾಗ್ಯವೇ ಸರಿ. ಇವರು ಯಾವಾಗಲೂ ಬ್ರಹ್ಮಾನಂದದಲ್ಲಿ ಇರುತ್ತಿರುವದರಿಂದ ಆನಂದಾಶ್ರಮ ಎಂಬ ಹೆಸರು ಇವರಿಗೆ ಸಾರ್ಥಕವಾಗಿದೆ. ಇವರು ಬಹಳ ದೊಡ್ಡ ಮನಸ್ಸಿನವರೂ, ವ್ಯಾಪಕ ದೃಷ್ಟಿಯವರೂ ಆಗಿರುವರು. ಸನ್ ೧೯೩೨ನೇ ಇಸವಿಯಲ್ಲಿ ಆದ ಮಹಾಸಭೆಯ ಠರಾವುಗಳ ಮೇಲಿಂದಲೇ ಇವರ ಉದಾರತ್ವವು ಎಷ್ಟು ಶ್ರೇಷ್ಟವಾದದ್ದೆಂಬದು ತಾನೇ ಕಾಣುತ್ತದೆ. ಇವರು ಚಿಕ್ಕ ಪ್ರಾಯ ದಲ್ಲಿಯೇ ಗುರುತ್ವ ಹೊಂದಿದ್ದರಿಂದ ಇವರ ಅಪ್ರಾಯಸ್ಥ ಕಾಲದಲ್ಲಿ ಮಠದ ಆಡಳಿತೆಯು ಕಷ್ಟಕ್ಕೀಡಾಯಿತು. ಹಿಂದಿನ ಗುರುಗಳ ಕಡೆಯ ದಿವಸ ಗಳಲ್ಲಿ ಕೆಲವು ಜನರಲ್ಲಿ ಅಸಮಾಧಾನ ಉಂಟಾಗಿ ಮಠಕ್ಕೆ ಜನರಿಂದ ಬರುವ ವಂತಿಗೆ ಉತ್ಪನ್ನವು ಕಡಿಮೆಯಾಗುತ್ತ ಬಂದಿತ್ತು. ಅದಲ್ಲದೆ ಮಠದ ಜಮೀನುಗಳ ಉತ್ಪನ್ನ ಕೂಡ ಸರಿಯಾಗಿ ಸಿಗುತ್ತಿದ್ದಿಲ್ಲ. ಇವೆಲ್ಲ ಕಾರಣ ಗಳಿಂದ ಮಠಕ್ಕೆ ೮೦ ಸಾವಿರ ರೂಪಾಯಿ ವರೇಗೆ ಸಾಲವಾಗಿತ್ತು. ಇವರು ಪ್ರಾಯಕ್ಕೆ ಬಂದ ಮೇಲೆ ಮಠಕ್ಕೆ ಇಂಥಾ ಸ್ಥಿತಿ ಬರಲಿಕ್ಕೆ ಒದಗಿದ ಕಾರಣ ಗಳನ್ನು ಸೂಕ್ಷ್ಮ ರೀತಿಯಿಂದ ಪರಿಶೋಧಿಸಿ ಅವನ್ನು ದೂರಮಾಡುವ ಬಗೆ ಹೇಗೆಂಬ ಕುರಿತು ವಿಚಾರ ಮಾಡತೊಡಗಿದರು. ಮಠಕ್ಕೆ ಸಾಲವಾಗಿದ್ದ ಮೂಲ ಕಾರಣಗಳಲ್ಲಿ ೨ ಮುಖ್ಯವಾದದ್ದು ಎಂದು ತಿಳಿದುಕೊಂಡರು. ೧ನೇದು— ಮಠದ ಆಡಳಿತೆಯಲ್ಲಿ ಕುಂದುಕೊರತೆಗಳು ಇದ್ದದ್ದು ೨ನೇದು— ಶಿಷ್ಯ ಜನರಲ್ಲಿ ಆಗಿದ್ದ ಅಸಮಾಧಾನ ಮೂಲಕ ಅನೇಕರು

ಮಠದಿಂದ ಕೆಲಸಪಟ್ಟಿಗೆ ದೂರವಾಗಿದ್ದದು—ಇವೆರಡು ಕಾರಣಗಳನ್ನು ಮೊದಲಿಗೆ ದೂರಮಾಡುವ ಅವಶ್ಯ ಕಂಡಿತು. ಮಠಕ್ಕೆ ವಿಧೇಯರಾಗಿ ನಡಕೊಳ್ಳುವ ಜನರಾವರೂ ಮೊದಲಿನಿಂದ ಇದೇ ವಿಚಾರದಲ್ಲಿ ಇದ್ದರು. ಕಟ್ಟಕಡೆಗೆ ಇವರೂ ಶ್ರೀ ಸ್ವಾಮಿಗಳೂ ಸನ್ ೧೯೩೨ನೇ ಇಸವಿಯಲ್ಲಿ ಒತ್ತಟ್ಟಿಗೆ ಕೂಡಿ ಮೇಲಿನ ಕಾರಣಗಳನ್ನು ದೂರಮಾಡಿ ಮಠವನ್ನು ಚಲೋ ಸ್ಥಿತಿಗೆ ತರಲಿಕ್ಕೆ ಮಹಾಸಭೆಯನ್ನು ಕರೆದು ಅದರಲ್ಲಿ ಎಲ್ಲ ಜನರ ಸಮ್ಮತಿ ಯಂತೆ ಒಂದು ಯೋಗ್ಯ ವಿಚಾರಮಾಡಬೇಕಾಗಿ ನಿಶ್ಚಯಿಸಿದರು. ಹಾಗೂ ಅದರಂತೆ ದಸಂಬರ ತಿಂಗಳಲ್ಲಿ ಮಹಾಸಭೆಯನ್ನು ಕರೆದರು. ಆ ಸಭೆ ಯಲ್ಲಿ ಮಠದ ಯೋಗ್ಯ ಆಡಳತೆ ಬಗ್ಗೆ Chief Executive Officer, ಎಂಬವರನ್ನು ನೇಮಿಸಿ, ಅವರ ಮೇಲೆ Supervising Board, ಅದರ ಮೇಲೆ Standing Committee ಎಂಬುದನ್ನು ನೇಮಿಸಿ ೧ನೇ ಕಾರಣ ವನ್ನು ದೂರಮಾಡಿದರು. ಇಂಗ್ಲಂಡಕ್ಕೆ ಹೋಗುವ ಜನರಿಗೆ ಹಿಂದಿನ ಗುರುಗಳ ಕಾಲಕ್ಕೆ ಹಾಕಿದ ನಿರ್ಬಂಧಗಳನ್ನು ತೆಗೆದು ಹಾಕಬೇಕೆಂತ ಠರಾವನ್ನು ಮಾಡಿ ಅದರಿಂದ ೨ನೇ ಕಾರಣವು ದೂರಮಾಡಲಾಯಿತು. ಮಠಕ್ಕೆ ಆದ ನಾಲ ೮೦ ಸಾವಿರ ರೂಪಾಯಿ ಹಾಗೂ ಮಠದ ಕಟ್ಟೋಣ ಗಳಿಗೆ ಅವಶ್ಯವಾಗಿ ಬೇಕಾಗುವ ೨೦ ಸಾವಿರ ರೂಪಾಯಿ ಅಂತು ೧ ಲಕ್ಷ ರೂಪಾಯಿಗಳ ಅವಶ್ಯ ಕಂಡು ಇಷ್ಟು ರಖಮು ಕೂಡಿಸಲಿಕ್ಕೆ ಜನರು ತಮ್ಮ ತಮ್ಮ ಒಂದು ತಿಂಗಳ ಉತ್ಪನ್ನವನ್ನು ೫ ವರ್ಷಗಳಲ್ಲಿ ಒಮ್ಮೆಗೇ ಅಥವಾ ಕಂತುಗಳಿಂದ ಕೊಡಬೇಕಾಗಿ ಇನ್ನೊಂದು ಠರಾವು ಮಾಡಿದರು. ಈ ಠರಾವನ್ನು ಪೂರ್ಣ ಜಾರಿಮಾಡಿ ಸಿದ್ಧಗೊಳಿಸುವ ಕಾರ್ಯವು ಮಹತ್ವ ದ್ದಿರುವದರಿಂದ ಈ ಮಹತ್ಕಾರ್ಯವನ್ನು ಮಹಾಸಭೆಯ ಅಧ್ಯಕ್ಷರಾದ ಶ್ರೀ ಹಟ್ಟಂಗಡಿ ಶಂಕರರಾಯರು ಬಹಳ ಪ್ರೀತಿಯಿಂದ ಹಾಗೂ ಆಸಕ್ತಿ ಯಿಂದ ಕೈಕೊಂಡರು. ಮೊದಲಿನಿಂದ ಮಠದ ಕೆಲಸದಲ್ಲಿ ಮನಸ್ಸು ಹಾಕಿ ಮಹಾಸಭೆ ಕರೆಯಲಿಕ್ಕೂ, ಆ ಸಂಬಂಧದಲ್ಲಿ ಪತ್ರವ್ಯವಹಾರ ನಡಿಸಿ ಆ ಕೆಲಸವು ಉತ್ತಮವಾಗಿ ಯೋಚಿಸಿದಂತೆ ಪೂರ್ಣ ಪಡಿಸಲಿಕ್ಕೂ ಕಂಕಣ ಬದ್ಧರಾಗಿ ಕೆಲಸ ಮಾಡಿದವರು ಇವರೇ.

ಈ ಆನಂದಾಶ್ರಮ ಸ್ವಾಮಿಗಳ ಪ್ರವಚನಗಳನ್ನು ಕೇಳಿದೊಡನೆ ಭಕ್ತವೃಂದರ ಮನಸ್ಸಿನ ಮೇಲೆ ಎಷ್ಟು ಚಲೋ ಪರಿಣಾಮವಾಗುತ್ತಿತ್ತೆಂಬ

ಬಗ್ಗೆ ನಾನು ನೋಡಿದ ಒಂದು ಸಂಗತಿಯನ್ನು ತಿಳಿಸಬೇಕೆಂದು ಕುತೂಹಲ ಪಟ್ಟು ಅದನ್ನು ಬರೆಯುವೆನು.—ಸನ್ ೧೯೩೩ಲನೇ ಇಸವಿ ದಶಂಬರ ತಿಂಗಳಲ್ಲಿ ಬೆಂಗಳೂರಿನಲ್ಲಿ ಶ್ರೀ ಗುರುಗಳ ಸವಾರಿ ಇದ್ದಾಗ ಅವರು ಒಂದು ದಿವಸ ಒಂದು ಪ್ರವಚನ ಕೊಟ್ಟಿದ್ದರು. ಆಗ ನಾನು ಅಲ್ಲಿ ಇದ್ದೆನು ಆ ಪ್ರವಚನವು ಬಹಳ ಮನೋವೇಧಕವಾಗಿದ್ದರಿಂದ ಅದನ್ನು ಕೇಳಿದ ಅಲ್ಲಿಯ ಜನರ ಕಣ್ಣಿನಲ್ಲಿ ನೀರು ಸುರಿಯಿತು. ಮುಖ್ಯವಾಗಿ ಅಲ್ಲಿ ನೆರೆದ ಜನರಲ್ಲಿ ಮದ್ರಾಸಿನ P. W. D. Executive Engineerರಾದ ರಾವ ಸಾಹೇಬ K. R. Tombat ಮತ್ತು ಮೈಸೂರ ಮಿಲ್ಲಿನ ಡಿಪ್ಯುಟಿ ಜನರಲ್ ಮೆನೇಜರರಾದ ಅವರ ತಮ್ಮ Mr. S. R. Tombat ಇವ ರಿಬ್ಬರ ಮನಸ್ಸಿನಲ್ಲಿ ಇಷ್ಟು ಚಲೋ ಪರಿಣಾಮವಾಯಿತಲ್ಲ! ಅವರು ೨ನೇ ದಿವಸವೇ ಶ್ರೀ ಗುರುದತ್ತ ಎಂಬವರ ಹತ್ತರ ತಮ್ಮ ಮನಸ್ಸಿನಲ್ಲಿ ಉಂಟಾದ ಕಳವಳ ಸ್ಥಿತಿಯನ್ನು ಹೇಳಿ ಅದನ್ನು ಶ್ರೀ ಗುರುಗಳಿಗೆ ಸ್ವತಃ ಹೇಳಲಿಕ್ಕೆ ಧೈರ್ಯ ಸಾಲದ್ದರಿಂದ ಅದನ್ನು ದಯಮಾಡಿ ಶ್ರೀ ಗುರುಗಳಿಗೆ ಸಭೆಯಲ್ಲಿ ಹೇಳಬೇಕಾಗಿ ಅವರನ್ನು ಬಿನ್ನೈಸಿಕೊಂಡರು. ಅದ ಏನೆಂದರೆ—"ನಾವು ಇಷ್ಟು ಕಾಲ ಪರಿಯಂತರ ಮಠಕ್ಕೆ ಮಾಡತಕ್ಕ ನಮ್ಮ ಕರ್ತವ್ಯ ಕರ್ಮವನ್ನು ಮಾಡಲಿಲ್ಲ. ಅದನ್ನು ನಾವು ಮಾಡಲಿಕ್ಕೆ ತಪ್ಪಿ ಬೇರೆ ಜನರಿಗೆ ಅವರ ಉದಾಹರಣೆ ಮಾಡಿ ಕೊಟ್ಟಂಥಾ ದೊಡ್ಡ ತಪ್ಪು ನಮ್ಮ ಕಡೆಯಿಂದ ಆಗಿರುತ್ತದೆ. ಈ ತಪ್ಪನ್ನು ನಾವು ಬಹಿರಂಗ ವಾಗಿ ಒಪ್ಪಿಕೊಳ್ಳುವದು ಅವಶ್ಯವೆಂತ ನಾವು ತಿಳಿಯುತ್ತೇವೆ. ಏಕೆಂದರೆ—ನಮ್ಮಂತೆಯೇ ನಡೆದ ಇನ್ನೂ ಜನರು ಇದ್ದರೆ ಅವರಿಗೆ ನಮ್ಮಂತೆ ಪಶ್ಚಾತ್ತಾಪ ಬುದ್ಧಿ ಉತ್ಪನ್ನವಾಗಿ ಅವರು ಶ್ರೀ ಮಠಕ್ಕೆ ತನು, ಮನ, ಧನಗಳ ಸೇವೆಯನ್ನು ಅರ್ಪಿಸಲು ಮುಂದರಿಯಬೇಕೆಂದು ಇಚ್ಛಿಸುತ್ತೇವೆ. ನಮ್ಮಿಂದ ಆಗಿಹೋದ ತಪ್ಪಿಗೆ ನಮಗೆ ಈಗ ಪಶ್ಚಾತ್ತಾಪವಾಗಿ ನಾವು ಹಿಂದಿನ ೬ ವರುಷಗಳ ನಮ್ಮ ವಂತಿಗೆ ಹಣವನ್ನು ಈಗ ಶ್ರೀ ಗುರುಗಳಿಗೆ ಅರ್ಪಿಸುತ್ತೇವೆ. ಶ್ರೀ ಗುರುಗಳು ನಮ್ಮ ಮೇಲೆ ದಯಾಪರರಾಗಿ ನಮ್ಮ ಅಪರಾಧವನ್ನು ಕ್ಷಮಿಸಬೇಕಾಗಿಯೂ ನಾವು ಮಾಡಿದ ಈ ಸಣ್ಣ ಸೇವೆ ಯನ್ನು ಗ್ರಹಣಮಾಡಿ ನಮಗೆ ಶುಭ ಆಶೀರ್ವಾದ ಕೊಟ್ಟು ನಮ್ಮನ್ನು ಕಾಪಾಡಬೇಕೆಂಬುದಾಗಿಯೂ" ಗುರುಗಳಿಗೆ ಬಿನ್ನೈಸಲಿಕ್ಕೆ ಅವರಿಗೆ

ಹೇಳಿದರು. ಅದರಂತೆ ಶ್ರೀ ಗುರುದತ್ತರಾಯರು ೨ನೇ ದಿವಸ ಕೂಡಿದ ಸಭೆಯಲ್ಲಿ ಶ್ರೀ ಗುರುಗಳಿಗೆ ಬಹಿರಂಗವಾಗಿ ಅದರಂತೆ ತಿಳಿಸಿದರು. ಹಾಗೂ ಇವರಿಬ್ಬರು ಕೊಟ್ಟ ರೂಪಾಯಿ ೧೨೦೦ ತುಂಬಿದ ಚೀಲವನ್ನು ಸ್ವಾಮಿಗಳ ಮುಂದೆ ಇಟ್ಟರು. ಇದನ್ನು ನೋಡಿ ಶ್ರೀ ಗುರುಗಳು ತೊಂಬತ್ ಸಹೋದರರಿಗೆ "ನೀವು ತಪ್ಪು ಮಾಡಿದ್ದೆಂಬುದು ನಮ್ಮ ತಿಳುವಳಿಕೆಯಲ್ಲಿಯೇ ಇಲ್ಲ. ನಿಮ್ಮ ಹಿರಿಯರು ಮಠಕ್ಕೆ ವಿಧೇಯರಾಗಿ ನಡೆಯುತ್ತಿದ್ದರೆಂಬುದು ಮಾತ್ರ ಕೇಳಿಕೆಯಲ್ಲಿ ಬಂದಿತ್ತು. ನೀವು ನಿಮ್ಮ ಕರ್ತವ್ಯಕರ್ಮವನ್ನು ತಿಳಿದುಕೊಂಡು ಸ್ವಧರ್ಮದಿಂದ ನಡೆಯುವದರ ಕಡೆಗೆ ನಿಮ್ಮ ಮನಸ್ಸು ಒಲಿದದ್ದು ನೋಡಿ ನಮಗೆ ಬಹಳ ಸಂತೋಷವಾಗಿದೆ. ನಿಮಗೆ ಭವಾನೀಶಂಕರನು ಕಲ್ಯಾಣ ಮಾಡುವನು" ಎಂದು ಆಶೀರ್ವಾದ ಮಾಡಿದರು. ಈ ಅಣ್ಣ ತಮ್ಮಂದಿರ ದೊಡ್ಡ ಮನಸ್ಸಿನ ಈ ಕ್ರಿಯೆಗೆ ಇವರು ಖಂಡಿತವಾಗಿ ಅಭಿನಂದನೆಗೆ ಪಾತ್ರರಿರುವರು ಎಂಬುದನ್ನು ಬೇರೆ ಹೇಳುವ ಅವಶ್ಯವಿಲ್ಲ.

ಈ ನಮ್ಮ ಶ್ರೀ ಆನಂದಾಶ್ರಮ ಗುರುಗಳ ಈ ವರೆಗಿನ ೩೭ ವರ್ಷಗಳ ಆಡಳಿತೆಯಲ್ಲಿ ಎಷ್ಟು ಸುಧಾರಣೆಗಳು ಆದವು ಹಾಗೂ ಆಗುತ್ತ ಇರುತ್ತವೆ ಎಂಬದು ಎಲ್ಲರಿಗೆ ತಿಳಿದ ವಿಷಯವೇ ಆಗಿದ್ದರಿಂದ ನಾನು ಅವನ್ನು ಇಲ್ಲಿ ಬರೆಯುವ ಸಾಹಸ ಮಾಡಲಿಲ್ಲ; ಸ್ವಾಮಿಗಳ ೨೫ ವರ್ಷದ ರಜತ ಮಹೋತ್ಸವವು ಸನ್ ೧೯೪೦ ನೇ ದಶಂಬರ ತಿಂಗಳಲ್ಲಿ ಬಹಳ ವಿಜೃಂಭಣೆಯಿಂದ ಚಿತ್ರಾಪುರ ಮಠದಲ್ಲಿ ಆದದ್ದು ನಾವೆಲ್ಲರೂ ನೋಡಿದ್ದೇವೆ. ಇನ್ನು ಮುಂದೆ ಇವರ ಆಳ್ವಿಕೆಯು ದೀರ್ಘಕಾಲದ್ದಾಗಿಯೂ, ಮಹಿಮೆಯುಳ್ಳದ್ದಾಗಿಯೂ, ಸುಖದಾಯಕವಾಗಿಯೂ, ಶಾಂತಮಯವಾಗಿಯೂ ಆಗಲಿ! ಎಂದು ದೇವರಲ್ಲಿ ಪ್ರಾರ್ಥಿಸಿ, ನಮ್ಮ ಎಲ್ಲ ಗುರುಗಳ ನಾಮಾವಳಿಯ ಒಂದು ಸಣ್ಣ ಸ್ತೋತ್ರವನ್ನು ಕೆಳಗೆ ಬರೆದು ಈ ಸಣ್ಣ ಚರಿತ್ರೆಯನ್ನು ಮುಗಿಸುತ್ತೇನೆ.

**ಪರಿಜ್ಞಾನಾಶ್ರಮ ಶ್ರೀ ಗುರು ಶಂಕರ**
**ಪರಿಜ್ಞಾನಾಶ್ರಮ, ಶಂಕರ ಸದ್ಗುರು**
**ಕೇಶವ, ವಾಮನ, ಕೃಷ್ಣ, ಪಾಂಡುರಂಗ**
**ಆನಂದಾಶ್ರಮ ಕಲ್ಪತರು ॥**